# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

---

೧೯೭೭ ಜನವರಿ ಸಂಚಿಕೆಯಲ್ಲಿ ನಾವು ಪ್ರಕಟಿಸಿದ "ಸುಳ್ಳು" ಎಂಬ ಸಮಸ್ಯೆ ಕಥೆಗೆ ಸಾವಿರಾರು ಓದುಗರು ಬಗೆಬಗೆಯಾಗಿ ಉತ್ತರ ಬರೆದಿದ್ದಾರೆ. ಅವುಗಳನ್ನೆಲ್ಲಾ ಪರಿಶೀಲಿಸಿ ಗೂಢಾರ್ಥ ಸ್ಪಷ್ಟತೆಯೂ ಸಂಕ್ಷಿಪ್ತವೂ ಉತ್ತಮವೂ ಆದ ಸಮಾಧಾನ, "...ರಾಜನ ಪ್ರಶ್ನೆಯೇ ಗರ್ವದ ನಟನೆ. ಈ ಪಂದ್ಯದ ಮೂಲಕ ರಾಜನು ತನ್ನ ಮನರಂಜನೆಗೆ ಒಬ್ಬನನ್ನು ಆರಿಸಿಕೊಂಡಿದ್ದಾನೆ" ಎಂದು ಬರೆದ ಶ್ರೀ ಟಿ. ವಿ. ಶೇಷಗಿರಿ, ೫೧-೬, ಪಶ್ಚಿಮಾಂಜನೇಯ ಗುಡಿ ಬೀದಿ, ಬೆಂಗಳೂರು-೪. ಎಂಬವರಿಗೆ ಬಹುಮಾನ ರೂಪಾಯಿ ನೂರನ್ನು ಈ ತಿಂಗಳಿನಲ್ಲಿ ಕಳಿಸಲಾಗುವುದು. ಇದಕ್ಕೆ ಉತ್ತರ ಬರೆದ ಇತರರಿಗೂ ಪ್ರತಿ ತಿಂಗಳೂ ಪ್ರಕಟವಾಗುವ ಫೋಟೋ ಶೀರ್ಷಿಕೆ, ಕಥಾ ಶಿರ್ಷಿಕೆ ಸ್ಪರ್ಧೆಗಳಲ್ಲಿ ಭಾಗವಹಿಸುವ ಎಲ್ಲರಿಗೂ ನಮ್ಮ ಹಾರ್ದಿಕ ಅಭಿನಂದನೆಗಳು.

---

ಸಂಪುಟ : ೫೮ ಏಪ್ರಿಲ್ '೭೭ ಸಂಚಿಕೆ : ೪

ಬಿಡಿ ಪ್ರತಿ ರೂ. ೧-೨೫ :: ವಾರ್ಷಿಕ ಚಂದಾ ರೂ. ೧೫-೦೦








# ಅಮರವಾಣಿ

ಅನುಪಾಯೇನ ಕರ್ಮಾಣಿ
ವಿಪರೀತಾನಿ ಯಾನಿ ಚ
ಕ್ರಿಯಮಾಣಾನಿ ದುಷ್ಯಂತಿ
ಹವೀಂಶ್ಯ ಪ್ರಯತೇಷ್ವಿವ ೧.

ಉಪಾಯವಿಲ್ಲದೆ ಮಾಡುವ ಕೆಲಸಗಳು ಅಪಾತ್ರರಿಗಿಟ್ಟ ಊಟದ ಹಾಗೆ ದೋಷವನ್ನುಂಟು ಮಾಡುತ್ತವೆ.

ಯಃ ಪಶ್ಚಾತ್ ಪೂರ್ವಕಾರ್ಯಾಣಿ
ಕರ್ಮಾಣ್ಯಭಿ ಚಿಕೀರ್ಷತಿ
ಪೂರ್ವಂ ಚಾಪರಕರ್ಮಾಣಿ
ನ ಸವೇದ ನಯಾನಯೌ ೨.

ಮೊದಲು ಮಾಡುವ ಕೆಲಸವನ್ನು ಮತ್ತೆ, ಮತ್ತೆ ಮಾಡುವ ಕೆಲಸವನ್ನು ಮೊದಲು ಮಾಡುವವನಿಗೆ ಒಳ್ಳೆಯದು ಕೆಟ್ಟದು ತಿಳಿಯದು.

ಚಪಲಸ್ಯ ತು ಕೃತ್ಯೇಷು
ಪ್ರಸಮೀಕ್ಷ್ಯಾಧಿಕಂ ಬಲಂ
ಕ್ಷಿಪ್ರಮನ್ಯೇ ಪ್ರಸದ್ಯಂತೇ
ಕ್ರೌಂಚಸ್ಯ ಖಮಿವ ದ್ವಿಜಾಃ ೩.

ಹೆಚ್ಚಾದ ಬಲವಿದ್ದರೂ ಚಪಲನಾದವನು ಕೆಲಸ ಮಾಡುವಾಗ ,ಇತರರು ಸಮಯ ನೋಡಿ ಓಡಿಸುತ್ತಾರೆ.

---

ಕೆಲಸಮಾಡುವ ವಿಧ

---



# ಮಿತ್ರಲಾಭ

೪೫

ಒಂಟಿಯಾಗಿದ್ದ ಮಂಥರಕ ಆಮೆಗೆ ತುಂಬಾ ಚಿಂತೆಯುಂಟಾಯಿತು. ಜಿಂಕೆಯನ್ನು ಬಿಡಿಸಿಕೊಂಡು ಬರಲು ಹೋದ ಕಾಗೆಯೂ ಇಲಿಯೂ ಇನ್ನೂ ಬರಲಿಲ್ಲ. ಅವುಗಳಿಗೆಲ್ಲ ಏನಾಯಿತೋ ಎಂದು ಹೆದರುತ್ತ, ಸುಮ್ಮನಿರಲಾಗದೆ ಆಮೆ ಅವು ಇರುವ ಸ್ಥಳಕ್ಕೆ ಹೊರಟಿತು.

ಆ ಸ್ಥಳವನ್ನು ಸಮೀಪಿಸುವಾಗ ಕಾಗೆ ಅದನ್ನು ನೋಡಿ ಗಾಬರಿಯಾಯಿತು. ಬೇಟೆಗಾರನು ಬಂದುಬಿಟ್ಟರೆ ಕಾಗೆ ಹಾರಿಹೋಗಬಲ್ಲುದು. ಜಿಂಕೆ ಓಡಿಹೋಗುತ್ತದೆ. ಇಲಿ ಯಾವುದಾದರೊಂದು ಬಿಲದೊಳಗೆ ನುಸುಳಿಹೋಗುತ್ತದೆ. ಆದರೆ ಮಂದಗತಿಯ ಆಮೆ ಹೇಗೆ ತಪ್ಪಿಸಿಕೊಳ್ಳುತ್ತದೋ ?

"ನೀನು ಏಕೆ ಬಂದೆಯಪ್ಪಾ ಮಂಥರಕಾ ? ಕೂಡಲೇ, ಇಲ್ಲಿಗೆ ಬೇಟೆಗಾರನು ಬರುವುದಕ್ಕೆ ಮೊದಲೇ ಬೇಗ ಬೇಗನೇ ಹಿಂದೆ ಹೋಗಿಬಿಡು" ಎಂದು ಕಾಗೆ ಅವಸರವಾಗಿ ಹೇಳಿತು.

"ನಾನೇನು ಮಾಡಲಿ ? ಜಿಂಕೆ ಆಪತ್ತಿನಲ್ಲಿರುವಾಗ ನೀವಿಬ್ಬರೂ ಎಷ್ಟು ಹೊತ್ತಾದರೂ ಬಾರದೆ ಹೋದಿರಿ. ಮನಸ್ಸು ಕೇಳಲಿಲ್ಲ. ನಿಲ್ಲಲಾರದೆ ಬಂದುಬಿಟ್ಟೆ" ಎಂದಿತು ಆಮೆ.

ಅಷ್ಟು ಹೊತ್ತಿಗೆ ಇಲಿ ಜಿಂಕೆಯ ಉರುಳಿನ ಬಂಧನವನ್ನು ಕಡಿದು ಮುಗಿಸಿತ್ತು. ಅದೇ ಹೊತ್ತಿಗೆ ಬೇಟೆಗಾರ ಅಲ್ಲಿಗೆ ಬರುವುದನ್ನು ಕಾಗೆ ನೋಡಿ ಗಟ್ಟಿಯಾಗಿ ಕೂಗಿತು.

ತತ್‌ಕ್ಷಣ ಜಿಂಕೆ ಹಾರಿ ಎದ್ದು ನಡುನಡುವೆ ತಿರುಗಿ ನೋಡುತ್ತಾ ಅತಿವೇಗವಾಗಿ ಸುರಕ್ಷಿತ ಸ್ಥಳಕ್ಕೆ ಓಡಿಹೋಯಿತು. ಕಾಗೆ ಮರದ ಮೇಲೆ ಹಾರಿ ಏನೂ ಅರಿಯದಂತೆ ಕುಳಿತಿತು. ಇಲಿ ಸಮೀಪದಲ್ಲಿದ್ದ ಬಿಲದೊಳಗೆ ತೂರಿತು.

ಜಿಂಕೆ ತಪ್ಪಿಸಿಕೊಂಡು ಹೋಯಿತಲ್ಲಾ ಎಂದು ನಿರಾಶೆಗೊಂಡ ಬೇಟೆಗಾರನಿಗೆ ಅಲ್ಲೇ ಬೇಗಬೇಗನೆ ತೆವಳಲಾಗದೆ ತೆವಳುವ ಆಮೆ ಕಣ್ಣಿಗೆ ಬಿತ್ತು. ಅದರಿಂದ ಸಂತೋಷಪಟ್ಟು ಅವನು ಅದನ್ನು ಹಿಡಿದು, ದರ್ಭೆಹುಲ್ಲಿನಿಂದ ತನ್ನ ಬಿಲ್ಲಿಗೆ ಕಟ್ಟಿ ಮನೆಯ ದಾರಿ ಹಿಡಿದು ಹೋಗತೊಡಗಿದನು. ಬೇಟೆಗಾರನು ಹಾಗೆ ಬಡ ಆಮೆಯನ್ನು ಹಿಡಿದುಕೊಂಡು

ಹಿಂಬದಿಯ ಚಿತ್ರಕಥೆ



ಹೋಗುವುದನ್ನು ನೋಡಿ ಇಲಿಗೆ ತುಂಬಾ ದುಃಖ ವಾಯಿತು. ಒಂದು ಆಪತ್ತು ತೊಲಗಿತೆಂದು ಆಗುತ್ತಲೇ ಇನ್ನೊಂದು ಬಂದು ಬಿತ್ತಲ್ಲ! ಇಂತಹ ಕಷ್ಟ ಪರಂಪರೆ ತನಗೇಕೆ ಬರುತ್ತದೋ? ಮೊದಲು ತನ್ನ ಆಸ್ತಿ ಪೂರಾ ಹೋಯಿತು. ತರುವಾಯ ಸ್ಥಾನ ಭ್ರಷ್ಟತೆಯಾಯಿತು. ಮತ್ತೀಗ ಮಿತ್ರರ ಆಗಲಿಕೆ! ಒಂದೂ ಅರ್ಥವಾಗದೆ "ಜೀವಿತವೇ ಹೀಗೆ. ತಗಲಿದ ಸ್ಥಳಕ್ಕೇ ತಗಲುತ್ತದೆ!" ಎಂದು ಕೊಂಡಿತು.

ಅಷ್ಟರಲ್ಲಿ ಜಿಂಕೆಯೂ ಕಾಗೆಯೂ ಆದರ ಬಳಿಗೆ ತಿರುಗಿಬಂದುವು. ಅವು ಕೂಡಾ ಆಮೆಗಾದ ಗತಿಯನ್ನು ನೋಡಿ ತುಂಬಾ ವಿಚಾರಕ್ಕೆ ಬಿದ್ದುವು. ಇಲಿ ಅವುಗಳೊಂದಿಗೆ, "ಮಿತ್ರರೇ, ಈಗ ಅಳುತ್ತಾ ಹೊತ್ತು ಕಳೆದರೆ ಆಗಲಿಲ್ಲ. ಮಂಥರಕ ಆಮೆ ನಮ್ಮ ಕಣ್ಣಿನ ಮೇರೆ ದಾಟಿ ಹೋಗುವುದರೊಳಗೆ, ಅದನ್ನು ಕಾಪಾಡಿದರೆ ಉಂಟು, ಏನಾದರೂ ಉಪಾಯ ಇದ್ದರೆ ಬೇಗನೇ ನೋಡಬೇಕು" ಎಂದಿತು.

"ನನಗೊಂದು ಆಲೋಚನೆ ಹೊಳೆಯುತ್ತದೆ. ಬೇಟೆಗಾರ ಹೋಗುವ ದಾರಿ ನನಗೆ ಗೊತ್ತು. ದಾರಿಯಲ್ಲಿ ಒಂದು ಕೆರೆ ತಗಲುತ್ತದೆ. ಅವನು ಇನ್ನು ಸ್ವಲ್ಪ ಹೊತ್ತಿಗೆ ಆ ಸ್ಥಳಕ್ಕೆ ಮುಟ್ಟುತ್ತಾನೆ. ಅಷ್ಟರೊಳಗೆ ಜಿಂಕೆ ಅಡ್ಡದಾರಿಯಿಂದ ಓಡಿಹೋಗಿ ಆ ಕೆರೆಯ ಬದಿಯಲ್ಲಿ ಸತ್ತ ಹಾಗೆ ಬಿದ್ದಿರಬೇಕು. ನಾನು ಇಲಿಯನ್ನು ಬೆನ್ನ ಮೇಲೆ ಕೂಡಿಸಿಕೊಂಡು ಅಲ್ಲಿಗೆ ಹೋಗಿ, ತೀರದಲ್ಲಿ ಇಳಿಸಿಬಿಡುತ್ತೇನೆ. ಆಮೇಲೆ ಜಿಂಕೆಯ ತಲೆಯಲ್ಲಿ ಕುಳಿತು ಅದರ ಕಣ್ಣುಗಳನ್ನು ಕಿತ್ತು ತಿನ್ನುವ ಹಾಗೆ ನಟಿಸುತ್ತೇನೆ. ಆ ದೃಶ್ಯ ನೋಡಿ ಬೇಟೆಗಾರ, ಜಿಂಕೆ ಸತ್ತಿತೆಂದು ನಂಬಿ ಆಮೆಯನ್ನು ಕಟ್ಟಿರುವ ತನ್ನ ಬಿಲ್ಲನ್ನು ಕೆಳಗಿಟ್ಟು ಜಿಂಕೆಯ ಹತ್ತಿರ ಹೋಗುತ್ತಾನೆ. ಆಗ ಇಲಿ ತಟ್ಟನೆ ದರ್ಭೆಯ ಕಟ್ಟನ್ನು ಕಡಿದು ಆಮೆಯನ್ನು ಬಿಡಿಸಬೇಕು. ಕೂಡಲೇ ಆಮೆ ಕೆರೆಯೊಳಗೆ ಹೋಗಿಬಿಡಬೇಕು. ಬೇಟೆಗಾರ ಸಮೀಪ ಬರುತ್ತಲೇ ನಾನು ಹಾರಿ ಮೇಲೆ ಹೋಗುತ್ತೇನೆ. ಜಿಂಕೆ ಎದ್ದು ಓಡಿಬಿಡಬೇಕು." ಎಂದಿತು ಕಾಗೆ.



"ಅದ್ಭುತ ! ಒಳ್ಳೇ ಉಪಾಯ ! ಈ ಉಪಾಯಕ್ಕೆ ಈಡು ಜೋಡಿಲ್ಲ. ನಾವು ಆಮೆಯನ್ನು ಖಂಡಿತಾ ಕಾಪಾಡುತ್ತೇವೆ. ಹಾಗೇ ಮಾಡುವ" ಎಂದಿತು ಜಿಂಕೆ ಉತ್ಸಾಹದಿಂದ.

ಅದು ಅಲ್ಲಿಂದ ಅಡ್ಡದಾರಿ ಹಿಡಿದು ಓಡಿ ಕೆರೆಯ ಬದಿಗೆ ಹೋಗಿ ತಕ್ಕ ಸ್ಥಳನೋಡಿ ಸತ್ತ ಹಾಗೆ ಬಿದ್ದಿತು. ಕಾಗೆ ಇಲಿಯನ್ನು ತನ್ನ ಬೆನ್ನ ಮೇಲೇರಿಸಿ ಕೊಂಡು ಕೆರೆಯ ತೀರದಲ್ಲಿ ಇಳಿಸಿ ಜಿಂಕೆಯ ತಲೆಯ ಮೇಲೆ ಕುಳಿತು ಅದನ್ನು ಚುಚ್ಚಿ ತಿನ್ನುವ ಹಾಗೆ ನಟನೆಗೆ ತೊಡಗಿತು.

ಸ್ವಲ್ಪ ಹೊತ್ತಿನಲ್ಲಿ ಬೇಟೆಗಾರ ಆ ದಾರಿಯಾಗಿಯೇ ಬಂದನು. ಸತ್ತು ಬಿದ್ದಿರುವ ಆ ಜಿಂಕೆಯನ್ನು ನೋಡಿ ಅವನಿಗೆ ಆತ್ಮಾನಂದವಾಯಿತು. ಅದು ಏನೋ ಗಾಯವಾಗಿಯೋ ನೀರಡಿಕೆಯಿಂದ ಬಳಲಿಯೋ ಸತ್ತುಬಿದ್ದಿದೆಯೆಂದುಕೊಂಡನು. ಬಿಲ್ಲಿಗೆ ಬಿಗಿದಿದ್ದ ಆಮೆ ತಪ್ಪಿಸಿಕೊಂಡು ಹೋಗುವಂತಿಲ್ಲವಾದುದರಿಂದ ಅವನು ಅದನ್ನು ಕೆಳಗಿಟ್ಟು ಜಿಂಕೆಯ ಬಳಿಗೆ ಹೋದನು.

ಆಗ ಅಡಗಿದ್ದ ಇಲಿ ಸರ್ರನೆ ಬಂದು ದರ್ಭೆಹುಲ್ಲಿನ ಕಟ್ಟನ್ನು ಕಡಿದು ಹಾಕಿ ಆಮೆಯನ್ನು ಬಿಡಿಸಿತು. ಆ ಕೂಡಲೇ ಆಮೆ ಬದುಕಿದೆನೆಂಬ ಆತ್ಮಾನಂದದಿಂದ ಪಕ್ಕದಲ್ಲಿರುವ ಕೆರೆಯೊಳಗೆ ಹಾರಿಬಿಟ್ಟಿತು.

ಬೇಟೆಗಾರ ಸಮೀಪಿಸಿದ ಕೂಡಲೇ ಕಾಗೆ ಹಾರಿ ಹೋಗಿ ಪಕ್ಕದಲ್ಲಿದ್ದ ಮರದ ಮೇಲೆ ಸೇರಿತು. ಜಿಂಕೆ ಚಂಗನೆ ಎದ್ದು ಅತಿ ವೇಗವಾಗಿ ಅಲ್ಲಿಂದ ಓಡಿ ಹೋಯಿತು.

ಬೇಟೆಗಾರನು ಆ ವಿಚಿತ್ರವನ್ನು ನೋಡಿ ಒಂದೂ ಅರ್ಥವಾಗದೆ ಬೆರಗಾಗಿ ನಿಂತನು. ಮತ್ತೆ ತನ್ನ ಬಿಲ್ಲಿನ ಹತ್ತಿರ ಬಂದು ಆಮೆ ಕೂಡಾ ದರ್ಭೆಹುಲ್ಲಿನ ಹಗ್ಗ ಕಡಿದುಕೊಂಡು ತಪ್ಪಿಸಿಕೊಂಡುದನ್ನು ನೋಡಿ, ಇನ್ನಷ್ಟು ಚಕಿತನಾದನು.

"ಇದೇನು ಕಲಿಕಾಲದ ವಿಧಿಯೋ ! ಈ ದೊಡ್ಡ ಜಿಂಕೆ ನನ್ನ ಉರುಳಿನಲ್ಲಿ ಸಿಕ್ಕಿಬಿದ್ದಿದ್ದರೆ ಅದನ್ನೂ ತಪ್ಪಿಸಿಬಿಟ್ಟಿತು. ಆಮೆ ನನ್ನ ಕೈಗೆ ಸಿಕ್ಕಿದರೆ ಅದನ್ನೂ ತಪ್ಪಿಸಿತು. ಹೆಂಡತಿ ಮಕ್ಕಳನ್ನುಬಿಟ್ಟು ಕಾಡಿನಲ್ಲಿ ತಿರುಗುವ ನಾನು ಬರಿಗೈಯಿಂದ ಮನೆಗೆ ಹೋಗಿ ಅವರ ಮುಖ ಹೇಗೆ ನೋಡಲಿ ? ಈ ದಿನ ಬೆಳಿಗ್ಗೆ ಯಾವ ಕೆಟ್ಟ ಶಕುನ ನೋಡಿದೆನೋ !" ಎಂದು ವಿಲಪಿಸುತ್ತಾ ಹೋದ ಬೇಟೆಗಾರ.

ಅವನು ಹೋದ ಮೇಲೆ ಮಿತ್ರ ಪ್ರಾಣಿಗಳು ಒಂದನ್ನೊಂದು ಆಪ್ಯಾಯವಾಗಿ ಆಲಿಂಗಿಸಿಕೊಂಡು, ಕೂಡಲೇ ಅಲ್ಲಿಂದ ಹೊರಟು ತಮ್ಮ ಸ್ಥಳಕ್ಕೆ ಹೋಗಿ ಸುಖವಾಗಿದ್ದುವು. ಮಿತ್ರರೆಂದರೆ ಹೇಗಿರಬೇಕು, ಎಂಥವರು ಎಂಬುದೆಲ್ಲ ಈಗ ಅವುಗಳಿಗೆ ಗೊತ್ತಾಯಿತು.



## ೧೮೩. ರಾಕ್ಷಸೀ ದೇವತೆ

ಕೊಲಂಬಿಯಾದ ಶಾನ್ ಅಗಸ್ಟನ್ ಪ್ರಾಂತದ ಅಗೆತದಲ್ಲಿ ಇಂತಹ ವಿಗ್ರಹಗಳು ನೂರರ ಲೆಕ್ಕದಲ್ಲಿ ಸಿಕ್ಕಿವೆ. ಈ ದೇವತೆಯನ್ನು ಪೂಜಿಸಿದವರು ಈಗ ಇಲ್ಲ. ಈ ಕೋರೆಹಲ್ಲು ದೇವತೆಯ ಬಲಗೈಯಲ್ಲಿ ಸುತ್ತಿಗೆ ಯಂತಹುದೂ, ಎಡಗೈಯಲ್ಲಿ ಶಂಖದಂತಹುದೂ, ಮುಖದಲ್ಲಿ ಕೋಪಾವೇಶವೂ ಕಾಣುತ್ತವೆ.





# ನಿರಾಕರಣೆ

ಎಂದೂ ಬತ್ತದ ಸಹನೆಯು ಒಸರುಳ್ಳ ಹೃದಯದವನಾದ ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ ಕೊಂಬೆಯಿಂದ ಶವವನ್ನು ಕೆಳಗಿಳಿಸಿ ತನ್ನ ಭುಜದಮೇಲೆ ಹಾಕಿಕೊಂಡು, ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೌ ಮಹಾರಾಜನೇ, ನೀನು ಈ ಕಷ್ಟವನ್ನು ಬೇಡಿ ತಂದುಕೊಂಡೆಯೋ ಅನಿಸುತ್ತದೆ. ಕೆಲವರು ಆಪದಗಳನ್ನು ಕೇಳಿ ತಂದುಕೊಳ್ಳುತ್ತಾರೆ. ಕಡೆಗೆ ಕೈಯ ಅಳವಿನೊಳಗೆ ಬಂದ ಲಾಭವನ್ನು ಒದ್ದು ಬಿಸುಟು ಹೋಗಿಬಿಡುತ್ತಾರೆ. ಇಂತಹ ಬುದ್ಧಿಯಿಲ್ಲದ ಕೆಲಸ ಮಾಡುವವರಿಗೆ ತಾರ್ಕಣೆಯಾದವನು ಚಂದ್ರಹಾಸನೆಂಬವನು. ನಿನಗೆ ದಾರಿಯ ಶ್ರಮ ತಿಳಿಯದಂತೆ ಆ ಕಥೆ ಹೇಳುತ್ತೇನೆ, ಕೇಳು" ಎಂದು ಹೇಳಿ ಕಥೆಯನ್ನು ಪ್ರಾರಂಭಿಸಿತು:

ಪೂರ್ವಕಾಲದಲ್ಲಿ ರವಿವರ್ಮ ಮತ್ತು ಶಶಿವರ್ಮ ಎಂಬ ಇಬ್ಬರು ರಾಜರು ನೆರೆಕರೆಯ ರಾಜ್ಯಗಳಿಗೆ ಅರಸರಾಗಿದ್ದರು. ಅವರಿಬ್ಬರ ನಡುವೆ ಅವರಜ್ಜನ ಕಾಲದಿಂದಲೇ ದ್ವೇಷವಿದ್ದಿತು. ಎರಡು ರಾಜ್ಯಗಳ

## ಬೇತಾಳಕಥೆಗಳು?..



ಇದರಿಂದ ನಮ್ಮ ರಾಜರ ಕೋರಿಕೆಗೆ ದೈವಚಿತ್ತ ಸಹಾಯಕವಾಗಿರುವುದೋ ಇಲ್ಲವೋ ತಿಳಿಯುವುದ ರೊಂದಿಗೆ. ನಿಮ್ಮ ಕುಮಾರನ ವೀರಪ್ರತಾಪಗಳೂ ಲೋಕ ವಿದಿತವಾಗುತ್ತದೆ." ಎಂದನು.

ಅವನ ಮಾತು ಕೇಳಿ ಶಶಿರ್ಮನಿಗೆ ಸಂತೋಷವೇ ಆಯಿತು. ಏಕೆಂದರೆ, ಅವನಿಗೆ ಒಬ್ಬನೇ ಮಗ. ರವಿವರ್ಮನಿಗಿರುವುದು ಒಬ್ಬಳೇ ಮಗಳು. ಈ ಮದುವೆಯಾಗಿಬಿಟ್ಟರೆ ಚಂದ್ರಹಾಸನು ಎರಡೂ ದೇಶಗಳನ್ನು ಪಾಲಿಸುವವನಾಗುವನು. ಆ ವಿಧವಾಗಿ ರಾಜ್ಯ ಲಾಭವಾಗುವುದರೊಂದಿಗೆ ತನ್ನ ತಾತಮುತ್ತಾತರ ಕಾಲದ ವೈರವೂ ನಾಶವಾಗಿ ಹೋಗುತ್ತದೆಂದು ಅವನಿಗೆ ತೋರಿತು.

ಆದುದರಿಂದ ಅವನು ಆ ಸ್ವಯಂವರದ ಆಹ್ವಾನ ವನ್ನು ಕುರಿತು ಚಂದ್ರಹಾಸನೊಂದಿಗೆ ಹೇಳಿ ಅಲ್ಲಿಗೆ ಹೋಗುವಂತೆ ಪ್ರೋತ್ಸಾಹ ಪಡಿಸಿದನು. ಚಂದ್ರ ಹಾಸನಿಗೆ ಅಲ್ಲಿಗೆ ಹೋಗಲು ಇಷ್ಟವಿರಲಿಲ್ಲ. ಆದರೂ ತಂದೆಯ ಮಾತನ್ನು ಅಲ್ಲಗಳೆಯಲಾಗದೆ, ತನ್ನೊಂದಿಗೆ ಸ್ನೇಹಿತನಾದ ಸುಬುದ್ಧಿಯನ್ನು ಕೂಡಾ ಕರೆದುಕೊಂಡು ಸ್ವಯಂವರಕ್ಕಾಗಿ ರವಿವರ್ಮನ ರಾಜ್ಯಕ್ಕೆ ಹೊರಟನು.

ಅವರಿಬ್ಬರೂ ಅರಣ್ಯಮಾರ್ಗವಾಗಿ ತಮ್ಮ ಕುದುರೆಗಳ ಮೇಲೆ ಹೋಗುತ್ತಿದ್ದರು. ಕಾಡಿನ ನಡುವಿನಲ್ಲಿ ಒಂದು ಆಟವಿಕರ ತಂಡವು ಅವರನ್ನು ಸುತ್ತಿಕೊಂಡಿತು. ಆಟವಿಕರು ಅವರನ್ನೆಲ್ಲ ಬಂಧಿಸಿ ತಮ್ಮ ನಾಯಕನ ಬಳಿಗೆ ಕರೆದೊಯ್ದರು.

ಸುಬುದ್ಧಿ ಆಟವಿಕರ ನಾಯಕನೊಂದಿಗೆ ತಾವು ಯಾರು, ಯಾವ ಕಾರ್ಯದ ಮೇಲೆ ಹೊರಟುದು ಮುಂತಾದುವನ್ನು ಹೇಳಿದನು. "ನೀವು ಯಾರಾದರೆ ನನಗೇನು ? ನಮ್ಮ ಪ್ರಾಂತದ ಮೇರೆ ದಾಟಿ ಪ್ರವೇಶ ಮಾಡಿದ ಯಾವ ಪರಕೀಯನನ್ನೇ ಆಗಲಿ, ಹಿಡಿದು ನಮ್ಮ ದೇವತೆಗೆ ಬಲಿ ಕೊಡುವುದು ನಮ್ಮ ಪದ್ಧತಿ.

ನಡುವೆ ಆಗಾಗ ಯುದ್ಧಗಳು ನಡೆಯುತ್ತಿದ್ದುವು. ಒಂದು ವೇಳೆ ಜಯವಾದರೂ ಆ ಎರಡು ರಾಜ್ಯ ಗಳನ್ನೂ ಒಂದು ಮಾಡಿಕೊಂಡು ಆಳುವ ಶಕ್ತಿ ಆ ಇಬ್ಬರು ರಾಜರಿಗೂ ಇರಲಿಲ್ಲ.

ಹೀಗಿರುವಾಗ ರವಿವರ್ಮ ತನ್ನ ಕುಮಾರಿಗೆ ಸ್ವಯಂವರವನ್ನು ಪ್ರಕಟಮಾಡಿದನು. ಈ ಸ್ವಯಂ ವರಕ್ಕೆ ಶಶಿವರ್ಮನ ಕುಮಾರನಾದ ಚಂದ್ರಹಾಸ ನನ್ನು ಆಹ್ವಾನಿಸಲು ರವಿವರ್ಮನು ಒಬ್ಬ ರಾಯ ಭಾರಿಯನ್ನೂ ಕಳುಹಿಸಿದನು.

ಆ ರಾಯಭಾರಿ ಶಶಿವರ್ಮನೊಂದಿಗೆ, "ನಮ್ಮ ಪ್ರಭುಗಳಾದ ರವಿವರ್ಮರು ತಮ್ಮೊಂದಿಗೆ ಬಾಂಧವ್ಯ ಬೆಳೆಸಲು ಇಚ್ಛಿಸುತ್ತಾರೆ. ಉಭಯ ದೇಶಗಳ ಮಧ್ಯೆ ಬಹಳ ಕಾಲದಿಂದಿರುವ ಶತ್ರುಭಾವನೆ ತೊಲಗಿ ಹೋಗಬೇಕೆಂದು ಅವರ ಆಶಯ. ಆದುದರಿಂದ ನಿಮ್ಮ ವೀರ ಕುಮಾರನು ಅಗತ್ಯವಾಗಿ ಬಂದು ಸ್ವಯಂವರದ ಸ್ಪರ್ಧೆಗಳಲ್ಲಿ ಭಾಗವಹಿಸಬೇಕು.

ಬೇಕಾದರೆ ಧೈರ್ಯ ಸಾಹಸವಿದ್ದವನು ನಮ್ಮಲ್ಲಿಯ ಒಬ್ಬ ಶೂರನೊಂದಿಗೆ ಹೋರಾಡಿ ಗೆದ್ದರೆ ಪಾರಾಗಿ ಹೋಗಬಹುದು. ' ಇಲ್ಲದಿದ್ದರೆ ಮಾತಾಡದೆ ಬಲಿಯಾಗ ಬೇಕಾದ್ದೆ "

"ನಿಮ್ಮ ಶೂರನೊಂದಿಗೆ ನಾನು ಹೋರಾಡುತ್ತೇನೆ" ಎಂದ ಚಂದ್ರಹಾಸ. ಆ ಮಾತು ಕೇಳಿದ ಕೂಡಲೇ ನಾಯಕನು ತನ್ನವರನ್ನು ನೋಡಿ, "ಇವರಿಬ್ಬರ ಕಟ್ಟುಬಿಚ್ಚಿ ಸ್ವೇಚ್ಛೆಯಾಗಿರಲು ಬಿಡಿ. ನಾಳೆ ಬೆಳಿಗ್ಗೆ ಬಲಪರೀಕ್ಷೆಯ ಹೋರಾಟಕ್ಕೆ ಏರ್ಪಾಡು ಮಾಡುತ್ತೇನೆ" ಎಂದನು.

ಹೀಗೆ ಆಟವಿಕರ ನಾಯಕನು ಚಂದ್ರಹಾಸ ಸುಬುದ್ಧಿಯರನ್ನು ಬಂಧಮುಕ್ತಮಾಡಿಸಿ, ಆ ರಾತ್ರಿ ಅವರ ಊಟ ತಿಂಡಿಗಳಿಗೂ, ನಿದ್ರೆಗೂ ಬೇಕಾದ ಎಲ್ಲಾ ಅನುಕೂಲತೆಗಳೂ ಸಿಗುವಂತೆ ಮಾಡಿದನು.

ರಾತ್ರಿಯಲ್ಲಿ ಸುಬುದ್ಧಿ ಚಂದ್ರಹಾಸನೊಂದಿಗೆ, "ನಾವು ಓಡಿ ಹೋಗಿಬಿಡೋಣ. ನಮ್ಮ ಮೇಲೆ ಕಾವಲುಕೂಡ ಇಡಲಿಲ್ಲ ಈ ಆಟವಿಕ ಮತಿಗೇಡಿಗಳು. ನಾಳೆ ಸುಮ್ಮನಾದರೂ ಈ ಮೊರಟು ಮನುಷ್ಯರೊಂದಿಗೆ ಹೋರಾಡುವುದೇಕೆ? ಈ ಜಾತಿಯವರು ತುಂಬ ಬಲಿಷ್ಠರಾಗಿಯೂ ಕ್ರೂರರಾಗಿಯೂ ಇರುತ್ತಾರೆ. ನೀನೇ ಗೆಲ್ಲುವೆಯೆಂದು ನಂಬುವುದಾದರೂ ಹೇಗೇ?" ಎಂದನು.

"ಹಾಗೆ ಹೇಡಿಯಾಗಿ ಓಡಿಹೋಗುವುದಕ್ಕಿಂತ ವೀರನ ಕೈಯಲ್ಲಿ ಸಾಯುವುದೇ ಒಳ್ಳೆಯದಲ್ಲವೆ? ನಮ್ಮ ಪ್ರಾಮಾಣಿಕತೆಯನ್ನು ನಂಬಿಯೇ ಅವನು ನಮ್ಮನ್ನು ಸ್ವೇಚ್ಛೆಯಾಗಿರಲು ಬಿಟ್ಟಿದ್ದಾನೆ. ಅಂಥವರಿಗೆ ಮೋಸಪಡಿಸುವುದಕ್ಕಿಂತಲೂ ನೀಚತನ ಬೇರೇನಿದೆ? ನಮಗೇನೂ ಭಯವಿಲ್ಲ ಬಿಡು" ಎಂದ ಚಂದ್ರಹಾಸ.

ಮರುದಿನ ಚಂದ್ರಹಾಸನಿಗೂ ಒಬ್ಬ ಆಟವಿಕ ವೀರನಿಗೂ ದ್ವಂದ್ವಯುದ್ಧ ನಡೆಯಿತು. ಅದರಲ್ಲಿ ಚಂದ್ರಹಾಸನು ಆಟವಿಕ ವೀರನನ್ನು ಮೂರ್ಛೆ ಬೀಳಿಸಿ ಜಯಶಾಲಿಯಾದನು. ಅವನನ್ನು ಮೆಚ್ಚಿಕೊಂಡ ಆಟವಿಕ ನಾಯಕನು ಚಂದ್ರಹಾಸನಿಗೂ





ಸುಬುದ್ಧಿಗೂ ಕಾಣಿಕೆಗಳನ್ನು ಕೊಟ್ಟು ಕಳುಹಿಸಿದನು. ಆಮೇಲ ಅವರಿಬ್ಬರೂ ನಿರಾಟಂಕವಾಗಿ ರವಿ ವರ್ಮನ ರಾಜಭವನವನ್ನು ತಲಪಿದರು. ತನ್ನ ಆಹ್ವಾನವನ್ನು ಗೌರವಿಸಿ ಸ್ವಯಂವರಕ್ಕೆ ಬಂದ ಚಂದ್ರಹಾಸನಿಗೆ ತಕ್ಕಬಿಡದಿಯನ್ನೂ, ಇತರ ಸದು ಪಾಯಗಳನ್ನೂ ಏರ್ಪಡಿಸಿಕೊಟ್ಟನು ರವಿವರ್ಮ.

ಸ್ವಯಂವರದ ಸ್ಪರ್ಧೆಗಳಲ್ಲಿ ಭಾಗವಹಿಸಲು ಬಂದವರ ನಡುವೆ ಅನೇಕ ಬಗೆಯ ಸ್ಪರ್ಧೆಗಳು ನಡೆದುವು. ಆ ಎಲ್ಲಾ ಬಗೆಯ ಸ್ಪರ್ಧೆಗಳಲ್ಲಿಯೂ ಚಂದ್ರಹಾಸನೇ ಗೆದ್ದು ಇತರ ಸ್ಪರ್ಧಾಳುಗಳೆಲ್ಲರನ್ನೂ ಸೋಲಿಸಿಬಿಟ್ಟನು.

ಎಲ್ಲಾ ಆದಮೇಲೆ ರವಿವರ್ಮನು ಚಂದ್ರಹಾಸ ನೊಂದಿಗೆ, "ನಾಳೆ ಬೆಳಿಗ್ಗೆ ನಿನ್ನೊಂದಿಗೆ ಕಮಲ ನಾಭನೆಂಬವನ ಜತೆಯಲ್ಲಿ ಸ್ಪರ್ಧೆ ನಡೆಯಲಿದೆ. ನಿಮ್ಮಿಬ್ಬರಲ್ಲಿ ಯಾರು ಗೆಲ್ಲುವರೋ ಅವರಿಗೇ ನನ್ನ ಮಗಳನ್ನಿತ್ತು ಮದುವೆ ಮಾಡುತ್ತೇನೆ." ಎಂದನು.

ಈ ಮಾತು ಕೇಳಿ ಸುಬುದ್ಧಿಗೆ ಕೋಪ ಬಂದಿತು. ಬಿಡದಿಗೆ ಬಂದಮೇಲೆ ಅವನು ಚಂದ್ರಹಾಸ ನೊಂದಿಗೆ, "ಈ ರಾಜನ ಉದ್ದೇಶವಾದರೂ ಏನು? ಸ್ವಯಂವರದ ಸ್ಪರ್ಧೆಗೆಂದು ನಿಂತವರೆಲ್ಲರನ್ನೂ ನೀನು ಸೋಲಿಸಿಬಿಟ್ಟೆ. ಆ ಕೂಡಲೇ ಮಗಳ ಕೈಯಲ್ಲಿ ಮಾಲೆ ಕೊಟ್ಟು ನಿನ್ನ ಕೊರಳಿಗೆ ಹಾಕಿಸಬೇಕಿತ್ತು. ಮತ್ತೆ ಯಾವನೋ ಇನ್ನೊಬ್ಬನೊಂದಿಗೆ ಸ್ಪರ್ಧೆ ಎನ್ನುತ್ತಾನಲ್ಲ? ಏನು ಅವನ ಉದ್ದೇಶ? ಇದೆಂಥಾ ನ್ಯಾಯವೆಂದು ನಾನು ಹೋಗಿ ಅವನೊಂದಿಗೆ ಕೇಳಿ ಬರಲೆ?" ಎಂದನು.

"ನೀನೇನೂ ಹೋಗಿ ಕೇಳುವ ಅಗತ್ಯವಿಲ್ಲ. ನನಗೆ ಪರಿಸ್ಥಿತಿ ಪೂರ್ತಿ ಅರ್ಥವಾಯಿತು. ಸುಮ್ಮ ನಿರು" ಎಂದ ಚಂದ್ರಹಾಸ.

ಅನಂತರ ಚಂದ್ರಹಾಸನು ಮಧ್ಯರಾತ್ರಿಯಲ್ಲಿ ಸುಬುದ್ಧಿಯನ್ನು ನಿದ್ದೆಯಿಂದ ಎಬ್ಬಿಸಿ, "ನಾವು ಇಲ್ಲಿಂದ ಹೊರಟು ಹೋಗೋಣ. ಬೆಳಗಾಗುವುದ ರೊಳಗೆ ಈ ರಾಜ್ಯದ ಗಡಿ ದಾಟಿಬಿಡಬೇಕು" ಎಂದು ಹೊರಟು ನಿಂತನು.

ಸುಬುದ್ಧಿಗೆ ನಿದ್ದೆಯು ಮತ್ತು ಇಳಿಯಿತು. ಅವನು ಚಂದ್ರಹಾಸನನ್ನು ಮೇಲೂ ಕೆಳಗೂ ಮಿಳಮಿಳ ನೋಡುತ್ತ, "ಏನಯ್ಯ ಇದು? ಬೆಳಗಾದರೆ ಇನ್ನೊಂದು ಸ್ಪರ್ಧೆಯಲ್ಲಿ ಕೂಡಾ ಗೆದ್ದು ರಾಜ ಕುಮಾರಿಯನ್ನು ಮದುವೆಯಾಗಲಾರೆಯಾ? ಕೈಯಳತೆಗೆ ಎಟಕುವ ವಿವಾಹವನ್ನು ಬೇಡವೆಂದು ಬಿಡುವಿಯಾ?" ಎಂದನು.

ಚಂದ್ರಹಾಸನು ಸುಬುದ್ಧಿಯ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳದೆ ಅವನನ್ನು ಬೇಗನೇ ಹೊರಡು ವಂತೆ ಅವಸರ ಪಡಿಸಿದನು. ಇಬ್ಬರೂ ತಮ್ಮ ಕುದುರೆಗಳ ಮೇಲೇರಿಕೊಂಡು ವಾಯುವೇಗದಿಂದ ಸಾಗಿ, ಮರುದಿನ ಸಾಯಂಕಾಲವಾಗುವುದರೊಳಗೆ ತಮ್ಮ ನಗರವನ್ನು ತಲಪಿದರು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಚಂದ್ರಹಾಸನು ಹಾಗೇಕೆ ಮಾಡಿದ? ಅವನಿಗೆ ಬುದ್ಧಿ ಕಡಿಮೆಯೆ? ದುಸ್ಸಾಹಸ ಮಾಡುವಂಥವನೇ? ಅಥವಾ ಹೇಡಿಯೇ? ಅವನು ಆಟವಿಕರ ಬಳಿಯಿಂದ ಅವರಿಗೆ ತಿಳಿಯದಂತೆ ತಪ್ಪಿಸಿಕೊಂಡು ಓಡಿ ಹೋದವನಲ್ಲ. ಅಲ್ಲಿ ಹೋರಾಟಕ್ಕೆ ನಿಂತನೇಕೆ? ಆ ಹೋರಾಟದಲ್ಲಿ ಅವನು ಸೋತಿದ್ದರೆ ಏನಾಗುತ್ತಿತ್ತು? ಸ್ವಯಂವರದಲ್ಲಿ ಎಲ್ಲಾ ಸ್ಪರ್ಧೆಗಳಲ್ಲಿ ಗೆದ್ದಿದ್ದುಕೂಡಾ, ಕಡೆಗೆ ಒಂದೇ ಸ್ಪರ್ಧೆ ಇದೆ ಎಂದಾಗ ತಪ್ಪಿಸಿಕೊಂಡು ಪರಾರಿಯಾದನೇಕೆ? ಈ ಅನುಮಾನಗಳಿಗೆ ತಕ್ಕ ಸಮಾಧಾನ ತಿಳಿದೂ ಹೇಳದೆಹೋದರೆ ನಿನ್ನ ತಲೆ ಯೊಡೆದು ಹೋಗುತ್ತದೆ! ಜೋಕೆ!" ಎಂದು ಹೇಳಿ ಸುಮ್ಮನಾಯಿತು.

ಆದಕ್ಕೆ ತ್ರಿವಿಕ್ರಮನು ಹೀಗೆಂದನು: "ಚಂದ್ರಹಾಸನು ಬುದ್ಧಿವಂತಿಕೆ, ಧೈರ್ಯ, ಔದಾರ್ಯ ಆತ್ಮವಿಶ್ವಾಸ ಎಲ್ಲಾ ಇದ್ದವನು. ನೀನು ಹೇಳಿದ ಅವಲಕ್ಷಣಗಳು ಹೆಸರಿಗೆಸಹಾ ಅವನಲ್ಲಿಲ್ಲ. ಅವನು ಆಟವಿಕರ ಪ್ರಾಮಾಣಿಕತೆಗೆ ಮೆಚ್ಚಿಕೊಂಡು ಅವರ ಹಾಗೆ ತಾನುಕೂಡಾ ಮಾತಿಗೆ ಕಟ್ಟುಬಿದ್ದು ಇರುವುದನ್ನೇ ಬಯಸಿದ. ಆದರೆ ರವಿವರ್ಮನು ವಿಶ್ವಾಸಘಾತಕನೆಂಬುದು ಸ್ಪಷ್ಟವಾಗಿ ಹೋಯಿತು. ತನ್ನ ಮಗಳನ್ನು ಕೊಟ್ಟು ಮದುವೆಮಾಡಿ ಹಳೆಯ ವೈರವನ್ನು ಮರೆಯುವಂತೆ ಮಾಡಬೇಕೆಂಬುದು ಅವನ ಉದ್ದೇಶವಾಗಿದ್ದರೆ ಸ್ಪರ್ಧೆಗಳನ್ನೇ ಇಡಬೇಡಿತ್ತು. ಅವನು ಪ್ರತ್ಯೇಕವಾಗಿ ರಾಯಭಾರಿಯನ್ನು ಕಳುಹಿಸಿ ಚಂದ್ರಹಾಸನನ್ನು ಕರೆಯಿಸಿದುದರಲ್ಲೇ ತಂತ್ರವಡಗಿತ್ತು. ಚಂದ್ರಹಾಸನ ತಂದೆ ಆಲೋಚನೆ ಮಾಡಿದಂತೆ ರವಿವರ್ಮ ಕೂಡಾ ಆಲೋಚಿಸಿ, ಹೇಗಾದರೂ ಚಂದ್ರಹಾಸನನ್ನು ಕೊಂದು ಬಿಟ್ಟರೆ ತನಗೆ ಶಶಿವರ್ಮನ ರಾಜ್ಯಕೂಡಾ ಸಿಕ್ಕಿಬಿಡುತ್ತದೆಂದೂ, ಆ ವಿಧವಾಗಿ ತಾತನಕಾಲದ ವೈರಕ್ಕೆ ಮುಕ್ತಿ ಸಿಗುತ್ತದೆಂದೂ ಲೆಕ್ಕಹಾಕಿದ್ದಾನೆಂದು ಸ್ಪಷ್ಟವಾಯಿತು. ಇದು ಚಂದ್ರಹಾಸನಿಗೆ ಸ್ಪಷ್ಟವಾದ ಹಾಗೆ ಸುಬುದ್ಧಿಗೆ ಅರ್ಥವಾಗಲಿಲ್ಲ. ಆದರೂ ಹೇಡಿ ಎನ್ನಿಸಿಕೊಳ್ಳಲು ಇಷ್ಟವಿಲ್ಲದೆ ಚಂದ್ರಹಾಸನು ಎಲ್ಲಾ ಸ್ಪರ್ಧೆಗಳಲ್ಲೂ ಭಾಗವಹಿಸಿ ಗೆದ್ದನು. ಇನ್ನೊಂದು ಪ್ರತ್ಯೇಕ ಸ್ಪರ್ಧೆಯನ್ನು ರವಿವರ್ಮ ಸೃಷ್ಟಿಸಿದ್ದಾನೆಂದರೆ ಅದು ವಿಷಮುಂತಾದ ಮೋಸದಿಂದ ತನ್ನನ್ನು ಕೊಲ್ಲುವುದಕ್ಕೆ ಎಂದು ತಿಳಿದು, ಚಂದ್ರಹಾಸನು ಅರ್ಧರಾತ್ರಿಯಲ್ಲಿ ಹಾಗೆ ಹೊರಟುಹೋಗಲು ಕಾರಣ. ನಿಜವೀರನು ಮೋಸವನ್ನು ಇದಿರಿಸಲಾರನು."

ರಾಜನಿಗೆ ಹೀಗೆ ಮೌನ ಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡ ತೊಡಗಿತ್ತು.





# ಕಳ್ಳನ ಮಗ

ಅನೇಕ ವರ್ಷಗಳ ಹಿಂದೆ ಒಂದು ಊರಿನಲ್ಲಿ ರಾಜನೆಂಬ ಒಬ್ಬ ಕಳ್ಳನಿದ್ದ. ಅವನು ಹಗಲು ಹಾಡೇ ಕಳ್ಳತನಮಾಡುವವನು. ಎದುರೆದುರೇ ಕದಿಯುವನು. ಅವನ ಹೆಸರು ಹೇಳಿದರೆ ಸಾಕು, ಆ ಪ್ರಾಂತದವರೆಲ್ಲರೂ ಗಡಗಡ ನಡುಗುವರು. ಧನವಂತರು ತಾವಾಗಿಯೇ ಅವನಿಗೆ ದೊಡ್ಡ ದೊಡ್ಡ ಮೊತ್ತದಲ್ಲಿ ಧನವನ್ನು ಕೊಡುತ್ತಿದ್ದರು. ಹೀಗಾಗಿ ಪ್ರಯತ್ನವಿಲ್ಲದೆಯೇ ಅವನಿಗೆ ಧನ ಸಿಗುತ್ತಿತ್ತು.

ಈ ವಿಧವಾಗಿ ರಾಜನು ಅಪಾರ ಬಂಗಾರವನ್ನು ಸಂಗ್ರಹಿಸಿಕೊಂಡನು. ಅವನಿಗೆ ಭೀಮನೆಂಬ ಮಗನಿದ್ದನು. ತಂದೆಯನ್ನೂ ಮೀರಿಸುವಷ್ಟು ಗುಂಡಿಗೆಯ ಶಕ್ತಿ ಮಗನಿಗೆ ಇದ್ದಿತು. ಅವನಿಗೆ ಹದಿನಾರು ವಯಸ್ಸು ತುಂಬಿದ ಕೂಡಲೇ ರಾಜನು ಅವನಿಗೆ ಚೋರವಿದ್ಯೆಗಳನ್ನು ಬೋಧಿಸ ತೊಡಗಿದನು.

ಒಂದು ದಿನ ರಾಜನು ಕಳ್ಳತನಕ್ಕೆ ಹೊರಡುವಾಗ ಭೀಮನನ್ನು ಕೂಡಾ ತನ್ನೊಂದಿಗೆ ಬಾರೆಂದು ಕರೆದನು. ಆದರೆ ಭೀಮನಿಗೆ ತನ್ನ ತಂದೆ ಅವಲಂಬಿಸಿರುವ ವೃತ್ತಿ ಅಸಹ್ಯವೆನಿಸಿರುವುದೆಂದು ಆ ದಿನ ಗೊತ್ತಾಯಿತು. ಅದುವರೆಗೆ ತಂದೆಗೆ ವಿಧೇಯನಾಗಿದ್ದವನು ಆ ದಿನ ತನ್ನ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತ "ಬೇಡ ಬಿಡಿ ಅಪ್ಪಾ, ನಿಮ್ಮ ಹಾಗೆ ಕಳ್ಳತನದ ಕತ್ತಲೆಯ ಬದುಕು ನನಗೇನೂ ಇಷ್ಟವಿಲ್ಲ. ನಿಮಗಾದರೂ ಏಕೆಬೇಕು? ಬೇಕಾದಷ್ಟು ಸಂಪಾದಿಸಿಟ್ಟಿದ್ದೀರಿ. ಇವತ್ತಿನಿಂದ ಬಿಟ್ಟುಬಿಡಿ." ಎಂದ.

ಮಗನ ಮಾತು ಕೇಳಿ ರಾಜ ಆದುರಿಬಿದ್ದು, "ಛೀ! ಏನೂ ತಿಳಿಯದ ಪೆದ್ದನ ಹಾಗೆ ಒದರುವೆಯಲ್ಲ! ನಾನು ಕಳ್ಳತನ ಮಾಡುತ್ತಿರುವುದು ಹೊಟ್ಟೆಗಿಲ್ಲದ ಗತಿಗೇಡಿತನಕ್ಕಾಗಿ ಅಲ್ಲ. ಇದು ನಮ್ಮ ಅಜ್ಜನ ಕಾಲದಿಂದ ನಡೆದು ಬಂದ ವೃತ್ತಿ. ಅನೇಕ ಮಂದಿ ಮೆಚ್ಚದಿರುವಂಥ ಕೆಲಸಗಳೂ ತುಂಬಾ ಇರುತ್ತವೆ. ಅಂತಹುದರಲ್ಲಿ ಇದೂ ಒಂದು. ಒಂದು ಕಾಲದಲ್ಲಿ ನಮ್ಮ ತಾತನ ಹೆಸರು ಹೇಳಿದರೆ ಕಬ್ಬಿಣದ ತಿಜೋರಿಗಳು ಗಡಗಡ ನಡುಗುತ್ತಿದ್ದವು. ನೀನು ಅಂಥವನಾಗುವಿಯೆಂದು ನಾನು ನಂಬಿದರೆ, ಎಂತಹ ಕೊಳಕು ಮಾತು ಹೇಳಿದಿ? ನನ್ನ ಹೊಟ್ಟೆಯಲ್ಲಿ ಹುಟ್ಟಿ ಇಂಥಾ ಹೇಡಿಯ ಮಾತು ನೀನಾಡುವುದನ್ನು ನಾನು ಸಹಿಸಲಾರೆ. ಗೇಣುಹೊಟ್ಟೆಯನ್ನು ತುಂಬಿಸಲು ಮಾರುದ್ದ ಕೆಲಸ ಮಾಡಬೇಕೆಂಬುದು ಕೈಲಾಗದವರು ಹೇಳುವ

ಬಿ. ನಾಗೇಶ್ವರರಾವ್

ಮಾತು. ತಲೆತಲಾಂತರವಾಗಿ ನಾವು ಲೋಕದವರ ದೃಷ್ಟಿಯಲ್ಲಿ ಕಳ್ಳರು. ಈಗ ಆಕಸ್ಮಾತಾಗಿ ಒಳ್ಳೆಯವರೆಂದೇ ಆದರೂ ಪ್ರಯೋಜನವಿಲ್ಲ" ಎಂದನು.

ಅಪ್ಪನ ಮಾತಿಗೆ ಭೀಮ ಒಪ್ಪದೆ, "ನಮ್ಮ ವಂಶವೆಲ್ಲಾ ಶಾಶ್ವತವಾಗಿ ಕಳ್ಳವೃತ್ತಿಯಲ್ಲಿ ನೆಲೆ ನಿಲ್ಲಬೇಕೆಂದು ನೆನೆಯುವುದಕ್ಕಿಂತಲೂ ಬುದ್ಧಿಹೀನತೆ ಇನ್ನೊಂದಿರಲಿಕ್ಕಿಲ್ಲ. ಈ ವೃತ್ತಿ ಯಾವಾಗಲೂ ನಮ್ಮನ್ನು ನಡೆಸಿಕೊಂಡು ಹೋಗಲಾರದು. ಒಂದು ದಿನ ಪೆಟ್ಟು ಬೀಳುತ್ತದೆ." ಎಂದನು.

"ಹಾಗಾದರೆ ನಡೆ, ನಿನ್ನ ದಾರಿ ನೀನೇ ನೋಡಿಕೋ. ಎಂದಾದರೊಂದು ದಿನ ನೀನು ನನ್ನ ದಾರಿಗೇ ಬಾರದೆ ಗತ್ಯಂತರವಿಲ್ಲವೆಂದು ನಿನಗೇ ತಿಳಿಯುತ್ತೆ" ಎಂದ ರಾಜ.

ಭೀಮನಿಗೆ ತಂದೆಯನ್ನು ತನ್ನ ದಾರಿಗೆ ಬದಲಾಯಿಸುವ ಉಪಾಯ ಕಾಣಲಿಲ್ಲ. ಅವನು ಮನೆ ಬಿಟ್ಟು ಹೋಗಿ ಸ್ವಂತಶಕ್ತಿಯಿಂದ ಬದುಕಲು ಎಷ್ಟೋ ಪ್ರಯತ್ನ ಮಾಡಿದ. ಭೀಮನ ಪ್ರಾಯದ ಯುವಕರು ಎಷ್ಟೋ ಬಗೆಯ ಕೆಲಸಗಳನ್ನು ಮಾಡಿ ಬದುಕುತ್ತಿದ್ದಾರೆ ನಿಜ. ಆದರೆ ಕಳ್ಳನ ಮಗನಾದುದರಿಂದ ಭೀಮನನ್ನು ಯಾರೂ ಹತ್ತಿರ ಬರಲು ಬಿಡುತ್ತಿರಲಿಲ್ಲ. ಹಾಲು ಹಣ್ಣು, ತರಕಾರಿಗಳನು ಮಾರುವವರು ಕೂಡಾ ಅವನನ್ನು ಬಹಳ ಹೀನಾಯವಾಗಿ ನೋಡುತ್ತಿದ್ದರು. ಆದುದರಿಂದ ಭೀಮನಿಗೆ ತುಂಬ ಸಂಕಟವಾಯಿತು.

ನಿರಾಸೆಯಿಂದ ಬಳಲಿ ನೀರಸನಾಗಿ ಮನೆಗೆ ಮರಳಿ ಬಂದ ಮಗನನ್ನು ನೋಡಿ ರಾಜ, "ಏನಪ್ಪಾ, ನೀತಿಯಿಂದ ನಡೆಯುವಂತಹ ದಾರಿ ಏನಾದರೂ ನೋಡಿಕೊಂಡೆಯಾ?" ಎಂದು ಕೇಳಿದ.

"ನೀವು ದೊಡ್ಡ ಕಳ್ಳರೆಂದು ತಿಳಿದವರು ನನ್ನನ್ನು ಹತ್ತಿರ ಹೇಗೆ ಸೇರಿಸಿಕೊಂಡಾರು? ನಿಮ್ಮ ಮಗನೆಂದು ಹೇಳಿಕೊಳ್ಳಲಿಕ್ಕೇ ನನಗೆ ನಾಚಿಕೆಯಾಗುತ್ತದೆ. ನಿಮ್ಮನ್ನೂ ನನ್ನನ್ನೂ ಯಾರೂ ಗುರುತಿಸದಿರುವಂತಹ ದೂರದ ಊರಿಗೆ ಹೋಗಬೇಕೆಂದಿದ್ದೇನೆ." ಎಂದ ಭೀಮ.





"ಹಾಗೇ ಹೋಗಿಬಿಡು. ನಾಲ್ಕು ದಿನ ಉಪವಾಸವಿದ್ದರೆ ನೀವಾಗಿ ತಿರುಗಿ ಬರುತ್ತೀ. ಬುದ್ಧಿಯೂ ಬರುತ್ತೆ" ಎಂದ ರಾಜ.

"ತಿರುಗಿ ಬರುತ್ತೇನೆ. ಆದರೆ ಉಪವಾಸವಿದ್ದು ಅಲ್ಲ ಹುಟ್ಟಿದ ಪ್ರತಿ ಮನುಷ್ಯನೂ ಕಳವಿನಿಂದಲೋ ಕೊಳ್ಳೆಯಿಂದಲೋ ಬದುಕಬೇಕಾಗುವುದೆಂಬ ನಿಮ್ಮ ಅಭಿಪ್ರಾಯವನ್ನು ಬದಲಾಯಿಸಿಕೊಂಡ ದಿನ ಬರುತ್ತೇನೆ. ತನ್ನ ಹೊಟ್ಟೆಗಾಗಿ ಇನ್ನೊಬ್ಬರ ಹೊಟ್ಟೆಯನ್ನು ಹೊಡೆಯುವ ಕೆಲಸವನ್ನು ಮನುಷ್ಯನಾದವನು ಮಾಡುವಂಥ ಕೆಲಸವಲ್ಲವೆಂಬುದನ್ನು ನೀವು ತಿಳಿದ ದಿನ ತಿರುಗಿಬರುತ್ತೇನೆ" ಎಂದು ಹೇಳಿ ಭೀಮ ತನ್ನ ಊರನ್ನೇ ಬಿಟ್ಟು ಹೊರಟುಹೋದನು.

ಭೀಮ ದೂರ ಕಣ್ಮರೆಯಾಗಿ ಹೋದ ಮೇಲೆ ರಾಜ ತುಂಬ ಬಳಲಿದನು. ಊಟ ಕೂಡ ಸಹಿಸಲಾರದಂತಾಯಿತು. ಇರುವ ಒಬ್ಬ ಮಗ, ತನ್ನ ನಂಬುಗೆಗೆ ದ್ರೋಹ ಮಾಡಿದನಲ್ಲ! ಅವನ ಮನಸ್ಸು ಇಳಿದು ಹೋದುದರಿಂದ ಕಳ್ಳತನಗಳಿಗೆ ಹೋಗುವುದನ್ನು ಕೂಡಾ ಬಿಟ್ಟನು. ರಾಜನಲ್ಲಿ ಬಂದ ದೊಡ್ಡ ಬದಲಾವಣೆ ಎಲ್ಲರಿಗೂ ಕಂಡುಬಂದಿತು. ಕ್ರಮವಾಗಿ ಪ್ರಜೆಗಳಲ್ಲಿ ಕಳ್ಳರ ಭಯ ಕೂಡಾ ತಗ್ಗಿಹೋಯಿತು. ಎಲ್ಲರಿಗೂ ಒಂದು ಬಗೆಯ ನೆಮ್ಮದಿ ಅನಿಸಿತು. ಬಹುಶಃ ಭೀಮ ಓಡಿಹೋದುದರಿಂದಲೇ ರಾಜ ಸಾಧುವಾಗಿರಬೇಕೆಂದು ಜನರು ಅಂದುಕೊಂಡರು.

ಹೀಗಿರುವಾಗ ಇದ್ದಕ್ಕಿದ್ದ ಹಾಗೆ ಒಬ್ಬ ವರ್ತಕನ ಮನೆಯಲ್ಲಿ ಲಕ್ಷಗಟ್ಲೆ ಬೆಲೆ ಬಾಳುವಷ್ಟು ನಗನಟ್ಟುಗಳು ಕಳುವಾದ ವಾರ್ತೆ ಹರಡಿತು. ಆ ಸಂಗತಿ ಕೇಳಿ ರಾಜನಿಗೂ ಗಾಬರಿಯಾಯಿತು. ಅದು ಅವನು ಮಾಡಿದ ಕಳ್ಳತನವಾಗಿರಲಿಲ್ಲ. ಆದರೆ ಲೋಕವು ಅವನನ್ನೇ ಶಂಕಿಸುತ್ತಿತ್ತು. ರಾಜನು ಆ ವರ್ತಕನ ಮನೆಗೆ ಹೋಗಿ, ಅಲ್ಲಿ ಕಳ್ಳತನ ಮಾಡಿದವನು ತಾನಲ್ಲವೆಂದು ಹೇಳಿಕೊಂಡನು.

ಆದರೆ ರಾಜನ ಮಾತನ್ನು ಯಾರೂ ನಂಬಲಿಲ್ಲ. ಅನೇಕ ವರ್ಷಗಳಿಂದ ಆ ಪ್ರಾಂತದಲ್ಲಿ ತನಗೆ ತಿಳಿಯದಂತೆ ಯಾವ ಕಳ್ಳತನಗಳೂ ನಡೆಯಲಿಲ್ಲವಾದುದರಿಂದ ತಾನು ನಿರ್ದೋಷಿ ಎಂಬುದನ್ನು ರಾಜನೇ ಈಗ ನಿರೂಪಿಸಬೇಕಾಯಿತು. ಆದುದರಿಂದ ಅವನೇ ಈ ಹೊಸ ಕಳ್ಳನನ್ನು ಹುಡುಕಲು ಹೊರಟು, ಯಾವ ಪ್ರಯೋಜನವೂ ಇಲ್ಲದೆ ಹಿಂತಿರುಗಿದನು.

ಇನ್ನೂ ಬೇರೆ ಬೇರೆ ಕಡೆಗಳಲ್ಲಿ ಕಳ್ಳತನಗಳ ಸುದ್ದಿ ಬರತೊಡಗಿದುವು. ಜನರಲ್ಲಿ ಮತ್ತೆ ಭೀತಿ ಶುರುವಾಯಿತು. ಆ ಕಳ್ಳನನ್ನು ಹಿಡಿಯಲು ರಾಜನು ರಾತ್ರಿಯ ಹೊತ್ತಿನಲ್ಲಿ ತಿರುಗಾಡಿಕೊಂಡೇ ಇದ್ದ.

ಇಷ್ಟರಲ್ಲಿ ರಾಜನ ಮನೆಯಲ್ಲೇ ಕಳ್ಳತನವಾಯಿತು. ಕಳ್ಳನನ್ನು ಹಿಡಿಯಲು ರಾಜನು ಎಲ್ಲೆಲ್ಲೋ ಸುತ್ತಾಡಿಕೊಂಡಿದ್ದ ಸಮಯದಲ್ಲಿ ಕಳ್ಳನು ಅವನ ಮನೆಯೊಳಗೆ ಪ್ರವೇಶಿಸಿ ಸಂಪೂರ್ಣವಾಗಿ ದೋಚಿಕೊಂಡು ಹೋಗಿಬಿಟ್ಟಿದ್ದ. ಈ ಸಂಗತಿ ಗೊತ್ತಾದ

ಕೂಡಲೇ ರಾಜ ಓಡುತ್ತಾ ತನ್ನ ಮನೆಗೆ ಬಂದು ನೋಡಿದನು. ಅವನ ಹೆಂಡತಿಯ ಕೈಕಾಲುಗಳನ್ನು ಕಟ್ಟಿ ಕೆಡವಲಾಗಿತ್ತು. ರಾಜ ಕಳ್ಳತನದಿಂದ ಕೂಡಿ ಹಾಕಿದ ಐಶ್ವರ್ಯವೆಲ್ಲವೂ ಹೋಯಿತು. ಒಂದೇ ದಿನದಲ್ಲಿ ರಾಜ ಬಿಕಾರಿಯಾಗಿಬಿಟ್ಟ.

ಈ ಸಮಾಚಾರ ಊರೆಲ್ಲಾ ಹಬ್ಬಿತು. ಜನರು ರಾಜನ ಮೇಲೆ ಸಂದೇಹಪಡುವುದನ್ನು ಬಿಟ್ಟರು. ಧನಿಕರು ಅವನ ಮೇಲೆ ಸಹಾನುಭೂತಿ ಕೂಡಾ ತೋರಿಸಿದರು. ಅದು ನಿಜವಾದ ಸಹಾನುಭೂತಿಯಲ್ಲವೆಂದೂ, ಸಂತೋಷವೆಂದೂ ರಾಜನಿಗೆ ಗೊತ್ತಿತ್ತು. ಹೀಗೆ ಎಲ್ಲವನ್ನೂ ಕಳೆದುಕೊಂಡು ರಾಜ ಮತ್ತೆ ತನ್ನ ವೃತ್ತಿಯನ್ನು ಪ್ರಾರಂಭಿಸಲು ಮನಸ್ಸು ಮಾಡಿ ಹೊರಟನು. ಧನಿಕರ ಮನೆಗಳಿಗೆ ಹೋಗಿ, ಹಿಂದೆ ತನಗೆ ಕೊಡುತ್ತಾ ಬಂದ ವಾಡಿಕೆಯ ಧನವನ್ನು ಕೊಡುವಿರೋ ಇಲ್ಲವೋ ಎಂದು ಜೋರು ಮಾಡಿ ಕೇಳತೊಡಗಿದನು. ಶಬ್ದ ಮಾತ್ರ ಜೋರೇ ಹೊರತು ಅದರಲ್ಲಿ ಸತ್ವ ಇರಲಿಲ್ಲ.

"ಇನ್ನು ಮೇಲೆ ನಿನಗಾರು ಹೆದರುತ್ತಾರೆ? ಹುಚ್ಚುಚ್ಚು ಮಾತಾಡಿದರೆ ಬೆನ್ನಿನ ಚರ್ಮ ಸುಲಿಸೇವು; ನಡೆ!" ಎಂದರು ಧನಿಕರು.

ಈ ಮೊದಲು ಯಾರಾದರೂ ತನ್ನನ್ನು ಹಾಗೆ ಬೆದರಿಸಿದ್ದರೆ ಅವರ ರಕ್ತ ನೋಡದೆ ಬಿಡುತ್ತಿರಲಿಲ್ಲ ರಾಜ. ಅಂಥವನು ಈಗ ಆ ಮಾತುಗಳಿಗೆ ಹೆದರಿ ಹಿಂದಿರುಗಿಬಿಟ್ಟ. ತನ್ನ ಈ ಬದಲಾವಣೆಗೆ ಕಾರಣ ವೇನೆಂದು ಅವನಿಗೆ ಗೊತ್ತಾಗಲಿಲ್ಲ.

ಆ ದಿನ ರಾತ್ರಿ ಅವನು ತನ್ನ ವಸ್ತುಗಳನ್ನೆಲ್ಲಾ ಗಂಟುಕಟ್ಟಿಕೊಂಡು, ಹೆಂಡತಿಯೊಂದಿಗೆ, ಆ ಊರನ್ನೇ ಬಿಟ್ಟು ಇನ್ನೆಲ್ಲಿಗಾದರೂ ಹೋಗಬೇಕೆಂದು ಹೊರಟನು. ಹಾಗೆ ಅವನು ಸ್ವಲ್ಪದೂರ ಹೋಗುವಾಗ, ಅವನ ಮಗ ಭೀಮ ಅವನಿಗೆದಿರಾಗಿಯೇ ಬಂದ. ರಾಜ ಮಗನನ್ನು ಬಾಚಿ ತಬ್ಬಿಕೊಂಡು ನಡೆದ ಎಲ್ಲಾ ಸಂಗತಿಯನ್ನೂ ಅವನೊಂದಿಗೆ ಹೇಳಿಕೊಂಡ.

ಅದನ್ನೆಲ್ಲ ಕೇಳಿ ಭೀಮ ಮುಗುಳ್ನಗೆ ನಕ್ಕು, "ಆಗಿ ಹೋದುದಕ್ಕೆ ಚಿಂತೆ ಪಡಬೇಡಿ. ಊರಿ



ನವರು ನಿಮ್ಮನ್ನು ಜೀವದೊಂದಿಗೆ ಬಿಟ್ಟಿರುವುದಕ್ಕೆ ಸಂತೋಷಪಡಬೇಕು. ನನ್ನ ಮನೆಗೆ ಹೋಗೋಣ ಬನ್ನಿ. ಅಲ್ಲಿ ನೀವು ಹಾಯಾಗಿರಬಹುದು" ಎಂದನು.

"ನನ್ನ ಹೆಸರು ಕೇಳಿದರೆ ನಡುಗುವ ಧನವಂತರು ಈಗ ನಾಯಿಗಿಂತ ಹೀನವಾಗಿ ಏಕೆ ನೋಡುವರೋ ಅರ್ಥವಾಗಲಿಲ್ಲಪ್ಪ. ನನ್ನಲ್ಲಿ ಏನು ಬಲಹೀನತೆ ಕಂಡಿತು ಅವರಿಗೆ?" ಎಂದ ರಾಜ ಮಗನೊಂದಿಗೆ ನಡೆಯುತ್ತಾ.

"ನಿಮಗೆ ನಿಮ್ಮ ವೃತ್ತಿಯಮೇಲೆ ಗೌರವವೂ ವಿಶ್ವಾಸವೂ ಎಲ್ಲಿಯವರೆಗೆ ಇತ್ತೋ ಅಲ್ಲಿಯ ವರೆಗೆ ಧನಿಕರೆಲ್ಲ ನಿಮ್ಮನ್ನು ನೋಡಿ ಹೆದರಿಕೊಂಡಿದ್ದರು. ನೀವು ಕಳ್ಳತನ ಮಾಡುವುದಿಲ್ಲವೆಂದು ಜನರನ್ನು ನಂಬಿಸಲು ನಾನಾಬಗೆಯಾಗಿ ಪಾಡುಪಡುತ್ತ ಇದ್ದುದರಿಂದ ಅವರ ದೃಷ್ಟಿಯಲ್ಲಿ ಹೀನ ಮನುಷ್ಯರಾದಿರಿ. ಈಗ ನೀವು ಕೋರೆಹಲ್ಲು ಕಳೆದುಕೊಂಡ ಹಾವೇ. ಏಕೆಂದರೆ ನಿಮ್ಮನ್ನು ಮೀರಿಸುವಂಥ ಕಳ್ಳನೊಬ್ಬ ತಲೆಯೆತ್ತಿ ಕೈವಾಡ ತೋರಿಸುತ್ತ ನಿಮ್ಮ ಮನೆಯನ್ನೇ ದೋಚಿಕೊಂಡು ಹೋದನಲ್ಲಾ? ಧನಿಕರು ಮುಡಿಪು ಕೊಡುವುದಾದರೆ ಅವನಿಗೆ ಕೊಡುತ್ತಾರೆಯೇ ಹೊರತು ನಿಮ್ಮಲ್ಲಿ ಏನಿದೆಯೆಂದು ಕೊಡುತ್ತಾರೆ? ನಿಮ್ಮ ವೃತ್ತಿಯೇ ನಿಮಗೆ ಮುಳುವಾಯಿತು. ಅಸಲು ಈ ವೃತ್ತಿಯ ಲಕ್ಷಣವೇ ಹೀಗೆಂದು ಗೊತ್ತಾಯಿತಪ್ಪೆ? ಇದು ಎಂದೋ ಒಂದು ದಿನ ಹೀಗೆಯೇ ಅಡ್ಡತಿರುಗಿಬಿಡುವಂಥಾದ್ದೇ ಅಂತ ನನಗೆ ಗೊತ್ತಿತ್ತು. ಸಮಾಜಕ್ಕೆ ಭಾರವಾಗಿದ್ದವನು ಒಂದು ದಿನ ಪತನವಾಗದಿರುವುದಿಲ್ಲ" ಎಂದ ಭೀಮ.

"ಹೌದಪ್ಪ. ಮೊದಲು ನೀನು ಈ ಮಾತು ಹೇಳಿದಾಗ ನನ್ನ ತಲೆಗೇರಲಿಲ್ಲ. ಈ ಹೊಸ ಕಳ್ಳ ನನ್ನ ಹೊಟ್ಟೆಗೆ ಬಡಿದುದಲ್ಲದೆ ನನ್ನ ಕಣ್ಣುಕೂಡಾ ಬಿಡಿಸಿದ. ಇನ್ನು ಏನಾದರೂ ನಾನು ಕಳ್ಳತನ ಮಾಡಲಾರೆ. ನೀನಂತೂ ಮೊದಲೇ ಬಿಟ್ಟೆಯಲ್ಲ. ಇನ್ನು ನಿನ್ನ ಹಾಗೇ ನಾನೂ ಕಷ್ಟಕೆಲಸ ಮಾಡಿಯೇ ಬದುಕುತ್ತೇನೆ" ಎಂದ ರಾಜ.

"ಆ ಹೊಸ ಕಳ್ಳ ನಿಜವಾದ ಕಳ್ಳನಲ್ಲ. ನಿಮ್ಮ ಗುಣವನ್ನು ಬದಲಾಯಿಸಲಿಕ್ಕೇ ಬಂದವನು ಈಗ ಗೆದ್ದ" ಎಂದ ಭೀಮ,

"ಹಾಗೋ? ಅವನನ್ನು ಬಲ್ಲೆಯಾ? ಯಾರವನು?" ಎಂದು ರಾಜ ಕೇಳಲು, "ಅದು ನಾನೇ ಅಪ್ಪಾ!" ಎಂದು ಭೀಮ ನಕ್ಕನು. "ಇನ್ನು ನನ್ನ ಉದ್ದೇಶ ಈಡೇರಿತು. ಕದ್ದವರ ಸೊತ್ತನ್ನೆಲ್ಲಾ ವಾಪಾಸು ಮಾಡಿಬಿಡುವುದೊಂದೇ ಉಳಿದಿದೆ. ಆಮೇಲೆ ನೆಮ್ಮದಿಯಾಗಿರೋಣ" ಎಂದು ಭೀಮ ಮತ್ತೂ ಹೇಳಿದ.





# ರಾಜನಿಗಿಂತ ದೊಡ್ಡವ

**ಒಂ**ದಾನೊಂದು ಕಾಲದಲ್ಲಿ ವಿಶಾಲವೆಂಬೊಂದು ದೇಶವಿತ್ತು. ಅದನ್ನು ಉದಾರಸೇನನೆಂಬ ರಾಜನು ಆಳುತ್ತ, ಪ್ರಜೆಗಳ ಒಳಿತಿಗಾಗಿ ಎಷ್ಟೋ ಶಾಸನಗಳನ್ನು ಹೊರಡಿಸಿದ್ದನು.

ಆದರೆ ಅವುಗಳ ಮೂಲಕವಾಗಿ ಸಾಮಾನ್ಯ ಪ್ರಜೆಗಳಿಗೆ ಏನೂ ಒಳಿತಾಗಲಿಲ್ಲ. ದೇಶದಲ್ಲಿ ಬಡತನವು ಯಾವಾಗಲೂ ತಾಂಡವಾಡಿಕೊಂಡೇ ಇತ್ತು. ಅದು ರಾಜನಿಗೆ ಗೊತ್ತಿತ್ತು. ಅದನ್ನು ಸರಿಪಡಿಸಲು ಏನು ಉಪಾಯವೆಂಬುದು ರಾಜನಿಗೆ ಎಷ್ಟು ಯೋಚಿಸಿದರೂ ತಿಳಿಯಲಿಲ್ಲ. ಲೋಪವು ಎಲ್ಲಿ ಅಡಗಿರುವುದೆಂದು ಅವನಿಗೆ ಗೊತ್ತಾಗಲಿಲ್ಲ. ಕಡೆಗೆ ರಾಜನು ಈ ವಿಷಯವನ್ನು ಕಂಡು ಹಿಡಿದು ಬಂದು ಹೇಳಬೇಕೆಂದು ರಕ್ತವರ್ಣನೆಂಬ ತನ್ನ ಅಂತರಂಗಿಕನೊಬ್ಬನನ್ನು ನಿಯಮಿಸಿದ.

ರಕ್ತವರ್ಣನು ಪ್ರಜೆಗಳ ನಡುವೆ ಹೋಗಿ ಅವರಲ್ಲೊಬ್ಬನಂತೆ ಇರುತ್ತ ಅನೇಕ ಬಗೆಯ ರಹಸ್ಯಗಳನ್ನು ತಿಳಿದುಕೊಂಡನು. ದೇಶದಲ್ಲಿ ಧನವೂ ಅದರಿಂದುಂಟಾದ ಇತರ ಶಕ್ತಿಗಳೂ ತುಂಬಾ ಇರುವವರು ಅಧಿಕಾರಿಗಳನ್ನು ಕೂಡಾ ಒಳಪಡಿಸಿಕೊಂಡು ಇತರ ಪ್ರಜೆಗಳಿಗೆ ಅನ್ಯಾಯ ಮಾಡುವ ರೀತಿ ಅವನಿಗೆ ಗೊತ್ತಾಯಿತು. ಅವರು ಮಾಡುವ ಅನ್ಯಾಯಗಳನ್ನು ಹೊರಗೆ ಹಾಕಲು ಯಾರಿಗೂ ಧೈರ್ಯವಿಲ್ಲದಂತೆ ಪರಿಸ್ಥಿತಿಯುಂಟಾಗಿತ್ತು. ಏಕೆಂದರೆ ಅನ್ಯಾಯಕ್ಕೆ ಸೂತ್ರಧಾರಿಗಳಾಗಿರುವವರು ಮಹಾರಾಜನಿಗೆ ಆಲೋಚನೆ ಹೇಳುವಂತಹ ದೊಡ್ಡ ದೊಡ್ಡ ಮಂದಿಗಳೇ. ಅವರ ಮೇಲೆ ದೂರು ಹೇಳುವಂಥವರು ಯಾರೂ ಇರಲಿಲ್ಲ.

ಈ ರಹಸ್ಯವು ರಕ್ತವರ್ಣನಿಗೆ ಗೊತ್ತಾಗುವಷ್ಟರಲ್ಲಿ ಆ ಸಂಗತಿ ದೇಶದೊಳಗಿನ ಧನಿಕರೆಲ್ಲರಿಗೂ ತಿಳಿದುಬಿಡುತ್ತಿತ್ತು. ರಕ್ತವರ್ಣ ಯಾರು ಏನೆಂಬ ಸಂಗತಿಯ ವಾಸನೆ ಅವರಿಗೆಲ್ಲ ತಿಳಿದೇಬಿಟ್ಟಿತು. ಆದುದರಿಂದ ಅವರು ರಕ್ತವರ್ಣನನ್ನು ಕರೆದು, ರಾಜನೊಂದಿಗೆ ತಮ್ಮನ್ನು ಕುರಿತು ಒಳ್ಳೆಯದಾಗಿ ಹೇಳಬೇಕೆಂದು, ಒಳ್ಳೆಯತನದಲ್ಲಿಯೇ ಹೇಳಿದರು. ಅವರು ಹೇಳಿದಂತೆ ಮಾಡದೆಹೋದರೆ, ತನಗೂ ತನ್ನ ಕುಟುಂಬಕ್ಕೂ ಅಪಾಯವಿದೆಯೆಂಬ ರಹಸ್ಯವೂ ರಕ್ತವರ್ಣನಿಗೆ ಅವರ ಮಾತಿನ ರೀತಿಯಿಂದ ಗೊತ್ತಾಯಿತು. ರಾಜನೊಡನೆ ಹೇಳದಿರುವುದೂ ಒಳ್ಳೆಯದಲ್ಲ. ಆದುದ



ರಿಂದ ಅವನು ರಾಜನ ಬಳಿಗೆ ಹೋಗಿ, ಗೂಢಾರ್ಥ ಗರ್ಭಿತವಾಗಿ ಹೀಗೆ ಹೇಳಿದನು:

"ಮಹಾರಾಜರೇ, ದೇಶದಲ್ಲಿ ಬರಗಾಲವೂ, ರುಜನೆಗಳೂ, ಬಡತನಗಳೂ ಏಕೆ ಬರುತ್ತಿವೆ, ಏಕೆ ಇನ್ನೂ ಹೋಗದಿವೆ ಎಂಬ ಸಂಗತಿ ನನಗೂ ಅರ್ಥವಾಗಲಿಲ್ಲ. ತುಂಬ ಆಶ್ಚರ್ಯವೇ ಆಗಿದೆ. ಏಕೆಂದರೆ ನಮ್ಮ ದೇಶದಲ್ಲಿ ಅನೇಕ ಬಗೆಯಲ್ಲಿ ಅತ್ಯಂತ ಸಮರ್ಥರಾದವರೆಲ್ಲ ಇದ್ದಾರೆ. ಕೆಲವರು ಕಲ್ಲುಗಳನು ಅಕ್ಕಿಯಾಗಿ ಬದಲಾಯಿಸುತ್ತಾರೆ. ಕೆಲವರು ನೀರನ್ನು ಹಾಲಾಗಿ ಮಾರ್ಪಡಿಸುತ್ತಾರೆ. ಇನ್ನು ಕೆಲವರಿಗೆ ಒಂದು ದೇವತೆಯಿಂದ ಇನ್ನೊಂದು ದೇವತೆಯನ್ನು ದಾಸಿಯನ್ನಾಗಿ ಮಾಡಿಕೊಳ್ಳಲೂ ಸಾಧ್ಯವಾಗುತ್ತದೆ. ಮಹಾ ಸಮುದ್ರಕ್ಕೆ ಅಣೆಕಟ್ಟು ಕಟ್ಟಲು ಸಮರ್ಥರಾದವರು ಕೂಡಾ ನಮ್ಮ ದೇಶದಲ್ಲಿದ್ದಾರೆ. ತಮ್ಮ ಪರಿಪಾಲನೆಯಲ್ಲಿ ಇಂತಹ ಸಮರ್ಥರಿರುವಾಗ ಬಡತನದ ಕಷ್ಟಗಳು ಇನ್ನು ಹೆಚ್ಚು ಕಾಲ ಇರಲಾರದೆಂದು ನನಗೆ ತೋರುತ್ತದೆ. ಇದೊಂದು ಒಳಿತು ಕೆಡಕುಗಳ ಸಂಧಿಕಾಲ, ಅಷ್ಟೇ."

ರಕ್ತವರ್ಣನು ಹೇಳಿದ ಮಾತುಗಳನ್ನು ಕೇಳಿ ಉದಾರಸೇನರಾಜನಿಗೆ ಬಹಳ ಸಂತೋಷವಾಯಿತು. ಅವನು ರಕ್ತವರ್ಣನಿಗೆ ಸನ್ಮಾನ ಮಾಡಿ, ದೇಶದಲ್ಲಿಯ ಧನಿಕರೆಲ್ಲರಿಗೂ ಅಭಿನಂದನೆಯ ಸಂದೇಶಗಳನ್ನು ಕಳುಹಿಸಿದನು.

ಅದನ್ನು ಕೇಳಿ ಧನಿಕರೆಲ್ಲ, ರಕ್ತವರ್ಣನು ತಮಗೆ ಅನುಕೂಲವಾಗಿ ರಾಜನೊಡನೆ ಹೇಳಿದನೆಂದು ಸಂತೋಷಪಟ್ಟು, ಅವನಿಗೆ ದೊಡ್ಡ ದೊಡ್ಡ ಬಹುಮಾನಗಳನ್ನು ಕೊಟ್ಟು ಗೌರವಿಸಿದರು.

ಹೀಗಿರುವಾಗ ವಿಶಾಲದೇಶದಲ್ಲಿ ಮರುವರ್ಷ ಸ್ವಲ್ಪ ಕೂಡಾ ಮಳೆಬಾರದೆ ಹೋಯಿತು. ಬೆಳೆಗಳೆಲ್ಲ ಒಣಗಿ ನಾಶವಾಗಿ ಹೋದುದರಿಂದ ಆಹಾರ ಧಾನ್ಯಗಳಿಗೆ ತೀವ್ರ ಬರವುಂಟಾಯಿತು. ಪ್ರಜೆಗಳು ಹಾಹಾಕಾರ ಮಾಡತೊಡಗಿದರು. ರಾಜನ ಕಿವಿಯವರೆಗೂ ಹೋಯಿತು ಆರ್ತನಾದ.

ಆಗ ಉದಾರಸೇನನು ರಕ್ತವರ್ಣನನ್ನು ಕರೆಯಿಸಿ, "ಹಿಂದೊಮ್ಮೆ ನೀನು ನಮ್ಮ ದೇಶದಲ್ಲಿ ಕಲ್ಲುಗಳನ್ನು ಅಕ್ಕಿಯನ್ನಾಗಿ ಮಾಡುವವರು ಇರುವರೆಂದು ಹೇಳಿದೆಯಷ್ಟೇ? ಈಗ ಅಂಥವರ ಅಗತ್ಯ ತುಂಬಾ ಬಂದಿದೆ. ಅವರು ಯಾರು? ಬೇಗನೇ ಅವರನ್ನು ಕರೆದುಕೊಂಡು ಬಂದುಬಿಡು" ಎಂದನು.

"ಈ ಕೆಲಸಕ್ಕೆ ಧನಗುಪ್ತನೇ ಸಾಕು. ಆತ ತುಂಬಾ ಸಮರ್ಥ. ನೀವು ಕರೆಯಿಸಿ ಕೇಳಿದರೆ ಅವನು ಸಾಧ್ಯವಾಗದೆಂದು ಹೇಳಲಾರ. ಓಡೋಡಿ ಬರುವವನೇ." ಎಂದ ರಕ್ತವರ್ಣ.

ಉದಾರಸೇನರಾಜನು ಧನಗುಪ್ತನಿಗೆ ಕರೆ ಕಳುಹಿಸಲು, ಅವನು ಸಂತೋಷದಿಂದ ಓಡಿಬಂದನು. ಅವನನ್ನು ನೋಡಿ ರಾಜನು, "ಅಯ್ಯಾ ಧನಗುಪ್ತ, ಈಗ ನಿನ್ನ ಶಕ್ತಿ ಸಾಮರ್ಥ್ಯಗಳ ಮೇಲೆಯೇ ನಮ್ಮ

ದೇಶದ ಆಹಾರ ಸಮಸ್ಯೆ ಆಧಾರಪಟ್ಟಿದೆ. ದೇಶದಲ್ಲಿ ಆಹಾರಧಾನ್ಯಗಳು ಸಂಪೂರ್ಣ ಇಲ್ಲವಾಗಿವೆ. ನಿನಗೆ ಬೇಕಾದಷ್ಟು ಮಂದಿ ಕೂಲಿಯವರನ್ನು ಇಟ್ಟುಕೋ. ನೀನು ಹೇಳಿದ ಕಲ್ಲುಗಳನ್ನು ಅವರಿಂದ ಬೇಕಾದ ಹಾಗೆ ಪುಡಿಮಾಡಿಸು. ಅವರ ಸಹಾಯದಿಂದ ನೀನು ನೀಲಪರ್ವತವನ್ನು ಅಕ್ಕಿಯನ್ನಾಗಿ ಬದಲಾಯಿಸ ಬೇಕು. ನಿನ್ನ ಕಾರ್ಯಕ್ಕೆ ಬೇಕಾದ ಕಲ್ಲುಗಳು ಆ ಪರ್ವತದಲ್ಲಿ ಬೇಕಾದಷ್ಟಿರಬಹುದು." ಎಂದನು.

ಧನಗುಪ್ತನು ಬೆಕ್ಕಸ ಬೆರಗಾಗಿ, "ಅದು ಹೇಗೆ ಸಾಧ್ಯವಾದೀತು ಪ್ರಭುಗಳೇ?" ಎಂದನು. ಈ ಅರ್ಥವಿಲ್ಲದ ತಿರುಗು ಪ್ರಶ್ನೆಗೆ ರಾಜನು ಕುಪಿತನಾಗಿ ಹುಬ್ಬು ಸುರುಗಿಸಿ, "ಅದು ನಿನಗೇ ಗೊತ್ತು, ವಾದಿಸ ಬೇಡ. ಬೇಗ ಕೆಲಸ ಮುಗಿಯಬೇಕು ಯಾವಾಗ ಕೆಲಸ ಮುಗಿಯುತ್ತೆ ಹೇಳು" ಎಂದನು.

ಆದರೂ ಧನಗುಪ್ತನು ಸಾಹಸಮಾಡಿ, "ಮಹಾರಾಜರೇ, ನಿಮಗೆ ಯಾರೋ ಸುಳ್ಳುಮಾತು ಹೇಳಿದ ಹಾಗೆ ಕಾಣುತ್ತದೆ. ಕಲ್ಲುಗಳನ್ನು ಅಕ್ಕಿಯನ್ನಾಗಿ ಮಾಡುವವನು ಈ ಭೂಮಿಯ ಮೇಲೆ ಹುಟ್ಟಿರಲಾರ." ಎಂದನು.

ಈ ಸಾರಿ ಉದಾರಸೇನ ರಾಜನ ಕೋಪವು ರಕ್ತವರ್ಣನ ಕಡೆಗೆ ತಿರುಗಿತು.

ರಕ್ತವರ್ಣನು ಸ್ವಲ್ಪವೂ ಹೆದರದೆ, "ಯಾಕೋ ಧನಗುಪ್ತರು ಸುಳ್ಳು ಹೇಳುತ್ತಿದ್ದಾರೆ. ಅವರು ಕಲ್ಲುಗಳನ್ನು ಅಕ್ಕಿಯನ್ನಾಗಿ ಮಾಡುವುದನ್ನು ನಾನು ಕಣ್ಣಾರೆ ಕಂಡಿದ್ದೇನೆ. ಅಕ್ಕಿಯಾಗಿ ಬದಲಾಯಿಸ ತಕ್ಕಂತಹ ಶುದ್ಧವಾದ ನುಣ್ಣಗಿನ ಕಲ್ಲುಗಳನ್ನು ಇವರು ವರದರಾಜಯ್ಯನಿಂದ ಹಣಕೊಟ್ಟು ಕೊಂಡುಕೊಳ್ಳುತ್ತಾರೆ" ಎಂದನು.

ಆ ಮಾತು ಕೇಳಿ ಧನಗುಪ್ತನು ತಡವರಿಸಿಕೊಂಡನು. ಇದರಲ್ಲೇನೋ ರಹಸ್ಯವಿರಬೇಕೆಂದು ರಾಜನಿಗೆ ಹೊಳೆಯಿತು. ಆಗಿಂದಾಗಲೇ ರಾಜನು



ಧನಗುಪ್ತನನ್ನೂ, ರಕ್ತವರ್ಣನನ್ನೂ ಕರೆದುಕೊಂಡು ಹೋಗಿ ನಿಜ ಸಂಗತಿಯನ್ನು ಸ್ಪಷ್ಟವಾಗಿ ತಿಳಿದ ಕೊಂಡನು. ಧನಗುಪ್ತನು ವರದರಾಜಯ್ಯನಿಂದ ಅಕ್ಕಿಯಗಾತ್ರದ ಕಲ್ಲುಗಳನ್ನು ಕೊಂಡುಕೊಂಡು, ಒಂಬತ್ತು ಗೋಣಿ ಅಕ್ಕಿಯಲ್ಲಿ ಒಂದು ಗೋಣಿ ಆ ಕಲ್ಲು ಹರಳಿನಂತೆ ಲೆಕ್ಕಮಾಡಿ ಬೆರೆಸುತ್ತಿದ್ದ. ಅಕ್ಕಿ ಅಭಿವೃದ್ಧಿ ಯಾಗುತ್ತಿತ್ತು.

"ನೋಡಿದಿರಾ ಪ್ರಭುಗಳೇ. ಇವರು ಒಂದು ಗೋಣೀ ಚೀಲ ಅಕ್ಕಿಯಂತಹ ಕಲ್ಲುಹರಳುಗಳನ್ನು ಒಂಬತ್ತು ಚೀಲಗಳ ಅಕ್ಕಿಯಲ್ಲಿ ಬೆರೆಸಿ ಹತ್ತು ಚೀಲ ಅಕ್ಕಿ ಮಾಡುತ್ತಾರೆ. ಅಕ್ಕಿಯ ಅಥವಾ ಧಾನ್ಯಗಳ ಬಣ್ಣಕ್ಕೆ ತಕ್ಕಂತೆ ಕಲ್ಲು ಹರಳುಗಳಿಗೆ ಬಣ್ಣವನ್ನೂ ಹಾಕುತ್ತಾರೆ. ಈಗಲಾದರೂ ಧನಗುಪ್ತರ ಶಕ್ತಿ ಸಾಮರ್ಥ್ಯಗಳು ತಿಳಿಯಿತಲ್ಲವೆ?" ಎಂದು ರಕ್ತವರ್ಣನು ರಾಜನನ್ನು ಕೇಳಿದನು. "ಇದುವೋ ಇವನ ಅತ್ಯದ್ಭುತ ಸಾಮರ್ಥ್ಯ?" ಎಂದು

ಉರಿದುಬಿದ್ದು ರಾಜನು ಧನಗುಪ್ತನನ್ನು ಕೂಡಲೇ ಖೈದು ಮಾಡಿಸಿದನು. ಆಮೇಲೆ ರಾಜನು ರಕ್ತವರ್ಣ ನೊಂದಿಗೆ, "ಇದೇ ರೀತಿ ನೀನು ಹೇಳಿದ ಉಳಿದ ವಿಷಯಗಳಲ್ಲಿ ಕೂಡಾ ಗೂಢಾರ್ಥವಿದ್ದಿರಬೇಕು. ಈಗ ಹೇಳು ಮತ್ತೆ" ಎಂದನು. ರಕ್ತವರ್ಣನು ಹೀಗೆಂದನು:

"ಹಾಲಿನಲ್ಲಿ ನೀರು ಬೆರೆಸಿ ಮಾರಿದರೆ ನೀರನ್ನು ಹಾಲಾಗಿ ಮಾರ್ಪಡಿಸಿದಂತೆತಾನೇ? ದೇಶದಲ್ಲಿಯ ವ್ಯಾಪಾರಸ್ಥರೆಲ್ಲರೂ ಇದೇ ವಿಧವಾಗಿ ಎಲ್ಲಾ ವಸ್ತುಗಳಲ್ಲೂ ಕಲಬೆರಕೆ ಮಾಡುತ್ತಾರೆ. ಧನವಂತರು ಲಕ್ಷ್ಮೀದೇವಿಯ. ಆಶ್ರಯದಲ್ಲಿ ಸರಸ್ವತೀಪ್ರಸನ್ನರಾದ ವಿದ್ಯಾವಂತರ ಕೈಯಿಂದ ಬಗೆಬಗೆಯ ಸೇವೆಗಳನ್ನು ಮಾಡಿಸಿಕೊಳ್ಳುತ್ತಾರೆ. ಅವರು ಎಷ್ಟೇ ಪ್ರಜಾಕಂಟಕ ರಾಗಿದ್ದರೂ ಯಾರೂ ತಿರುಗಿಬೀಳುವುದಿಲ್ಲ. ಅಂದರೆ ಈ ದನಿಕರು ಪ್ರಜಾಸಮುದ್ರಕ್ಕೆ ಅಣೆಕಟ್ಟು ಕಟ್ಟಿ, ಅದರಿಂದ ಪ್ರತಿಫಲ ಪಡೆದು ಮತ್ತಷ್ಟು ಧನವಂತ ರಾಗುತ್ತಾ ಇರುತ್ತಾರೆ. ಇದೇ ದೇಶದ ಪರಿಸ್ಥಿತಿ."

ಈ ವಿವರಣೆ ಕೇಳಿ ರಾಜನು ಆಶ್ಚರ್ಯಪಡುತ್ತ, "ದೇಶದಲ್ಲಿ ಇಷ್ಟು ಅನ್ಯಾಯಗಳು ನಡೆಯುತ್ತಿರುವಾಗ, ನಾನು ಹೇಳಿದ ಬಾಧ್ಯತೆಯನ್ನು ಮರೆತು ಸಂತೋಷದಿಂದ ಸುಮ್ಮನೆ ಕುಳಿತುಬಿಟ್ಟೆಯಲ್ಲ?" ಎಂದು ರಕ್ತವರ್ಣನ ಮೇಲೆ ಕೋಪಿಸಿದನು.

"ನಾನಾದರೂ ಏನುಮಾಡಲಿ ಪ್ರಭುಗಳೇ? ನೀವು ಮಾಡಿದ ಶಾಸನಗಳನ್ನು ಉಲ್ಲಂಘಿಸಿದವರಿಗೆ ದೊಡ್ಡ ದೊಡ್ಡ ಶಿಕ್ಷೆಗಳಿವೆ. ಆದರೆ ನಾವು ಅಪರಾಧಿಗಳೆಂದು ನೋಡಿದವರೆಲ್ಲರೂ ಶಾಸನಗಳನ್ನು ಧಿಕ್ಕರಿಸಿದವರೇ. ಆದರೂ ಅವರಿಗೆ ಯಾವ ಶಿಕ್ಷೆಯೂ ಬೀಳುವಂತಿರಲಿಲ್ಲ. ಇದನ್ನು ಆಲೋಚಿಸಿ ನೋಡಿದಾಗ ಅವರು ನಿಮಗಿಂತಲೂ ಬಲಿಷ್ಠರಾಗಿರಬೇಕೆಂದು ನನಗೆ ತೋರಿತು. ಆದುದರಿಂದಲೇ ಅವರ ಅಪರಾಧಗಳನ್ನು ನೇರಾಗಿ ನಿಮ್ಮಮುಂದೆ ಹೇಳಲಾರದೆ ಹೋದೆ" ಎಂದ ರಕ್ತವರ್ಣ.

ರಾಜನು ಸಮಾಧಾನಗೊಂಡು, "ಹೌದು. ಶಾಸನಗಳನ್ನೇ ಉಲ್ಲಂಘಿಸಿಕೂಡಾ ಶಿಕ್ಷೆ ಪಡೆಯದವರು ರಾಜನಿಗಿಂತ ಬಲವಂತರೇ ಆಗುವರು. ಅಂತಹವರು ನಮ್ಮ ದೇಶದಲ್ಲಿ ಹೆಚ್ಚಾಗಿರುವ ಕಾರಣದಿಂದ ದೇಶವು ಅಧೋಗತಿಯಲ್ಲಿದೆ. ಈ ಲೋಪವನ್ನು ಸರಿಮಾಡಬೇಕು" ಎಂದನು.

ಆಮೇಲೆ ಉದಾರಸೇನನು ತಕ್ಕ ಕ್ರಮಗಳನ್ನು ಕೈಕೊಂಡು, ದೇಶದೊಳಗಿನ ಅನೀತಿ ಗಾಮಿಗಳನ್ನೆಲ್ಲ ಖೈದುಮಾಡಿಸಿ ತನ್ನ ಶಾಸನಗಳು ಕ್ರಮವಾಗಿ ಅಮಲಾಗುವಂತೆ ಸ್ವಯಂ ನೋಡುತ್ತ, ಬೇಗದಲ್ಲೇ ದೇಶದ ಬಡತನವನ್ನು ತೊಲಗಿಸಿದನು. ಹಾಗು ಯಾವಾಗಲೂ ಎಚ್ಚರದಲ್ಲಿದ್ದನು.





# ಮದುಮಗ

ರಾಮಪುರವೆಂಬುದೊಂದು ಗ್ರಾಮವಿತ್ತು. ಆ ಗ್ರಾಮದಲ್ಲಿ ಸುಬ್ಬರಾಯರೆಂಬ ಗೃಹಸ್ಥರಿಗೆ, ಶಕುಂತಲಮ್ಮನೆಂಬವಳು ಹೆಂಡತಿಯಾಗಿದ್ದಳು. ಅವರಿಗೆ ಯಾವುದಕ್ಕೂ ಕಡಿಮೆ ಇರಲಿಲ್ಲವಾದರೂ ಮದುವೆಯಾಗಿ ಬಹಳ ವರ್ಷಗಳಾಗಿಯೂ ಮಕ್ಕಳಾಗಲಿಲ್ಲ. ಎಷ್ಟು ವ್ರತ ಉಪವಾಸಗಳನ್ನು ಮಾಡಿದರೂ ಪ್ರಯೋಜನವಾಗಲಿಲ್ಲ.

ಕಡೆಗೆ ಒಂದು ದಿನ ಅವರ ಮನೆಗೆ ಒಬ್ಬ ಸಾಧು ಬಂದು ಅವರ ಕೊರತೆ ತಿಳಿದು ಶಕುಂತಲಮ್ಮನಿಗೆ ಒಂದು ಚಿಟಿಕೆ ಭಸ್ಮವನ್ನು ಕೊಟ್ಟು, ''ಈ ವಿಭೂತಿಯನ್ನು ನೀರಿನಲ್ಲಿ ಕಲಸಿ ಕುಡಿದರೆ ಮಗನು ಹುಟ್ಟುತ್ತಾನೆ, ಅವನು ಮದುವೆಯಾಗುವವರೆಗೆ ಮಂದಮತಿಯಾಗಿದ್ದು, ಮದುವೆಯಾದ ಕೂಡಲೇ ಬುದ್ಧಿವಂತನಾಗುತ್ತಾನೆ. ಅದುವರೆಗೆ ನಿಮಗೆ ಚಿಂತೆಯಿದ್ದರೂ ಅಷ್ಟೇನೂ ದೊಡ್ಡದಲ್ಲ. ಅವನಿಗೆ ಮದುಮಗ ಎಂದೇ ಹೆಸರಿಡಿ'' ಎಂದು ಹೇಳಿ ಹೊರಟು ಹೋದನು.

ಆ ಸಾಧು ಹೇಳಿದಂತೆಯೇ ಎಲ್ಲವೂ ನಡೆಯಿತು. ಒಂದು ವರ್ಷ ಕಳೆಯುವುದರೊಳಗೆ ಶಕುಂತಲಮ್ಮ ಸುಂದರವಾದ ಗಂಡುಮಗನಿಗೆ ತಾಯಿಯಾದಳು. ಅವನಿಗೆ ''ಮದುಮಗ'' ಎಂದೇ ಹೆಸರಿಟ್ಟರು. ಹೆಸರಿಗೆ ತಕ್ಕಹಾಗಿರಬೇಕೆಂದುಕೊಂಡು ತಂದೆತಾಯಿಯರು ಅವನನ್ನು ಚಿಕ್ಕತನದಿಂದಲೂ ಮದುಮಗನಂತೆಯೇ ವೇಷ ಹಾಕಿ ಬೆಳೆಸುತ್ತಿದ್ದರು. ಮದುಮಗ ಸಿಂಗರಿಸಿದ ಬೊಂಬೆಯಂತೆ ಬೆಳೆಯುತ್ತಿದ್ದ.

ಐದು ವರ್ಷ ತುಂಬಿದ ಕೂಡಲೇ ಅವನಿಗೆ ಅಕ್ಷರಾಭ್ಯಾಸ ಮಾಡಿಸಲಾಯಿತು. ಹೆಸರಿಗೆ ಮಾತ್ರ ಅವನು ಓದುಬರೆಹ ಕಲಿಯುತ್ತಾನೆಂಬ ಮಾತೇ ಹೊರತು ಅವನಿಗೆ ಯಾವುದೂ ಅಂಟಿರುವಂತೆ ಕಾಣಲಿಲ್ಲ. ಏನು ಕಲಿತನೋ ಯಾರಿಗೂ ತಿಳಿಯದು.

ಯುಕ್ತವಯಸ್ಸು ಬಂದ ಮೇಲೆ ಅವನ ಓದು ಬರೆಹಗಳನ್ನು ನಿಲ್ಲಿಸಿ, ಪಟ್ಟೇಪಂಚೆ, ಜರಿಯ ಶಾಲು, ಹಣೆಯಲ್ಲಿ ತಿಲಕ ಹೀಗೆ ಮದುಮಗನ ವೇಷದಲ್ಲಿ ತಿರುಗಾಡಲು ಬಿಟ್ಟರು. ಅವನು ಬೀದಿ ಬೀದಿ ತಿರುಗಾಡುವಾಗ ನೋಡಲು ಚೆನ್ನಾಗಿ ಕಂಡರೂ, ಅವನ ಹೆಸರೇ ಮದುಮಗನಾದರೂ ಶುದ್ಧ ಮೊದ್ದು ಎಂಬ ಅಭಿಪ್ರಾಯದಲ್ಲಿ ಊರವರಾರೂ ಅವನಿಗೆ ಹೆಣ್ಣು ಕೊಡಲು ಮುಂದೆ ಬರಲಿಲ್ಲ.

ಸಿ. ಆರ್. ಪ್ರಕಾಶರಾವ್

ಒಂದು ದಿನ ಸುಬ್ಬರಾಯರು ತಮ್ಮ ಹೆಂಡತಿಯೊಂದಿಗೂ ಮಗನೊಂದಿಗೂ ಎಲ್ಲಿಗೋ ದೂರ ಪ್ರಯಾಣ ಮಾಡಬೇಕಾಗಿ ಬಂತು. ಮಾರ್ಗದ ನಡುವೆ ಒಂದು ಊರಿನ ಹತ್ತಿರ ಅವರ ಗಾಡಿ ನಿಂತು ಹೋಯಿತು.

ದಾರಿಗೆ ಅಡ್ಡವಾಗಿ ಅನೇಕ ಮಂದಿ ನಿಂತುಕೊಂಡು ಏನೋ ವಾದವಿವಾದ ಮಾಡಿಕೊಂಡಿದ್ದರು. ಪಕ್ಕದಲ್ಲಿದ್ದ ಮನೆಯಲ್ಲಿ ಮದುವೆಯಂತೆ. ವರದಕ್ಷಿಣೆ ವಿಷಯದಲ್ಲಿ ತಕರಾರು ಬಂದು ಉಭಯಪಕ್ಷದವರೂ ತೀವ್ರ ಘರ್ಷಣೆಗಿಳಿದಿದ್ದರು.

ಅದೇನೋ ಬೇಗ ಮುಗಿಯುವಂತೆ ಕಾಣಲಿಲ್ಲ. ಮದುಮಗ ಗಾಡಿಯಿಂದಿಳಿದು ತಿರುಗಾಡುತ್ತಾ ಅತ್ತಿತ್ತ ನೋಡುತ್ತಾ ಮುಂದೆ ನಡೆದ. ಅವನಿಗೆ ಮದುವೇ ಮನೆಯಲ್ಲಿ ಮೊಳಗುವ ವಾದ್ಯ ಮೇಳಗಳ ಶಬ್ದ ಕೇಳಿಸಿತು.

ಅಲ್ಲಿ ಮದುವೆಯ ಸಂಭ್ರಮ ನೋಡೋಣವೆಂದುಕೊಂಡು ಮದುವೆ ಚಪ್ಪರದೊಳಗೆ ನಡೆಯುತ್ತಾ ಹೋದ. ಹಸೆಯಲ್ಲಿದ್ದ ವಧುವಿನ ಬದಿಯಲ್ಲಿ ನಿಂತಿದ್ದ ಪುರೋಹಿತರು ಅವನನ್ನು ನೋಡಿ, ಅನುಮಾನದಿಂದ— "ಯಾರಪ್ಪಾ ನೀನು ?" ಎಂದು ಕೇಳಿದರು. ಅವರು ತನ್ನ ಹೆಸರು ಕೇಳುವರೆಂದುಕೊಂಡು "ನಾನು ಮದುಮಗ" ಎಂದ.

"ಸರಿ, ಬಾ. ತಗಾದೆ ಮುಗಿಯಿತಷ್ಟೇ ? ನಿನ್ನನ್ನು ಮೊದಲು ಕಳಿಸಿದರೋ ? ಬಾ, ಹೀಗೆ ಮುಹೂರ್ತ ಮೀರುತ್ತಿದೆ" ಎಂದು ಅವನ ಕೈಹಿಡಿದು ಎಳೆದು ವಧುವಿನ ಪಕ್ಕದಲ್ಲಿ ಮಣೆಯಲ್ಲಿ ನಿಲ್ಲಿಸಿ ಮದುವೆಯ ಕ್ರಮವನ್ನು ಪ್ರಾರಂಭಿಸಿ ಹುಡುಗಿಯಿಂದ ಅವನಿಗೆ ಮಾಲೆ ಹಾಕಿಸಿದರು.

ಹೊರಗೆ ತಕರಾರು ತೀರಲೇ ಇಲ್ಲ. ಮದುಮಗಳ ತಂದೆ ಸಂತಾಪದಿಂದ ಚಪ್ಪರದೊಳಗೆ ಬಂದರು. ಅಷ್ಟರೊಳಗೆ ಪುರೋಹಿತರು ಮುಖ್ಯ ಕ್ರಮಗಳನ್ನು ನಡೆಸಿಯಾಗಿತ್ತು. ಮದುಮಗ ಬಂಗಾರದಂತಿದ್ದಾನೆ ! ವಿವರವೆಲ್ಲ ಆಮೇಲೆ ತಿಳಿಯೋಣವೆಂದುಕೊಂಡು ನೋಡುತ್ತಾ ಸುಮ್ಮನಿದ್ದರು ಹುಡುಗಿಯ ತಂದೆ. ಒಂದು ಬಗೆಯ ಸಂತೃಪ್ತಿಯು ಸಂತೋಷವಿತ್ತು ಅವರ ಮುಖದಲ್ಲಿ.

ಈ ವಿಧವಾಗಿ ಮದುಮಗನ ಮದುವೆ ಮುಗಿದು ಹೋಯಿತು. ಅವನ ತಂದೆತಾಯಂದಿರು ಅನಿರೀಕ್ಷಿತವಾಗಿ ನಡೆದುಹೋದ ಅವನ ಮದುವೆಯನ್ನು ನೋಡಿ ಅತ್ಯಂತ ಸಂತೋಷದಿಂದ ಆ ಸಾಧುವನ್ನು ನೆನೆದರು. ಸಾಧು ಹೇಳಿದಂತೆಯೇ ಮದುವೆ ಮುಗಿದ ಮರು ನಿಮಿಷದಲ್ಲಿ ಮದುಮಗನಿಗೆ ತಾನು ಕಲಿತ ಓದುಬರೆಹಗಳೆಲ್ಲಾ ನೆನಪಿಗೆ ಬಂದು ಎಲ್ಲರಿಂದಲೂ ಬುದ್ಧಿವಂತನೆನ್ನಿಸಿಕೊಂಡನು.





# ಕೆಡುಕಿನ ಹೊಡೆತ

ಅನೇಕ ವರ್ಷಗಳ ಹಿಂದೆ ಶಿಳ್ಳಂಗೇರಿ ಎಂಬ ಪಟ್ಟಣದಲ್ಲಿ ಗೋಪಾಲಯ್ಯನೆಂಬ ಉದ್ಯೋಗಸ್ಥನಿದ್ದನು. ಅವನಿಗೆ ತಕ್ಕಷ್ಟು ಸಂಬಳವೂ ಬರುತ್ತಿದ್ದಿತು. ಅದರಿಂದ ಅವನು ಹೆಂಡತಿ ಶ್ರೀದೇವಮ್ಮನೊಂದಿಗೆ ಹಾಯಾಗಿ ಕುಟುಂಬ ನಡೆಸಿಕೊಂಡಿರಲು ಸಾಧ್ಯವಾಗುತ್ತಿದ್ದಿತು.

ಆದರೆ ಅವನ ಅಕ್ಕಪಕ್ಕದಲ್ಲಿರುವವರು ದೊಡ್ಡ ದೊಡ್ಡ ಶ್ರೀಮಂತರು. ಅವರೆಲ್ಲ ಗಂಭೀರವಾಗಿ ಭವ್ಯವಾದ ಮಾಳಿಗೆಯ ಮನೆಗಳಲ್ಲಿರುವವರು. ಅಲ್ಲಿಯ ಹೆಂಗುಸರೆಲ್ಲ ಪಟ್ಟೆಸೀರೆಗಳನ್ನೇ ಉಡುತ್ತಿದ್ದರು. ಶರೀರಗಳಲ್ಲಿ ವಜ್ರಾಭರಣಗಳನ್ನು ಧರಿಸಿಕೊಂಡು ಜಗಜಗಿಸಿಕೊಂಡಿರುವವರು. ಅವರನ್ನು ನೋಡುತ್ತಾ ಶ್ರೀದೇವಮ್ಮನಿಗೆ, ಅವರ ಹಾಗೇ ತಾವುಕೂಡಾ ಮಾಳಿಗೆಯ ಮನೆಯಲ್ಲಿದ್ದು, ಪಟ್ಟೆಸೀರೆ, ವಜ್ರಾಭರಣಗಳಿಂದ ಚೆನ್ನಾಗಿರಬೇಕೆಂದು ತೋರುತ್ತಿತ್ತು. ಆದರೆ ಗೋಪಾಲಯ್ಯನಿಗಿರುವ ಆದಾಯವು ಅಷ್ಟಕ್ಕೆಲ್ಲಾ ಸಾಲದು. ಆದುದರಿಂದ ತಮ್ಮ ಕೈಗೆ ಎಟಕಲಾರದ ಕೋರಿಕೆಗಳು ಬೇಡವೆಂದು ಹೆಂಡತಿಗೆ ಹೇಳುತ್ತಿದ್ದನು.

"ರಾಜನ ಆಸ್ಥಾನದಲ್ಲಿ ಕೆಲಸ ಮಾಡುವವರು ನಿಮ್ಮಹಾಗಿದ್ದಾರೆಯೋ ? ಎಷ್ಟು ಜನ ಎರಡು ಕೈಗಳಿಂದಲೂ ಸಂಪಾದಿಸುವುದಿಲ್ಲ ? ನೀವೊಬ್ಬರು ಕೈಲಾಗದದವರು. ನಿಮ್ಮನ್ನು ಕಟ್ಟಿಕೊಂಡದ್ದು ನನ್ನ ದುರಾದೃಷ್ಟ. ಸಾಯುವವರೆಗೂ ಕುದಿದುಕೊಂಡಿರಬೇಕಾದ್ದೇ ! ನನ್ನ ಕರ್ಮ !" ಎಂದು ಶ್ರೀದೇವಮ್ಮ ದಿನಾ ಗಂಡನ ಮುಂದೆ ಕೊರಗಿ ಹಣೆ ಚಚ್ಚಿಕೊಳ್ಳುವಳು.

ಹೆಂಡತಿಯ ನಿತ್ಯತಾಪವನ್ನು ತಾಳಲಾಗದೆ ಗೋಪಾಲಯ್ಯ ಅನೀತಿಗೆ ಬಿದ್ದು, ಹಣ ಸಂಪಾದಿಸಲು ಪ್ರಾರಂಭಿಸಿಬಿಟ್ಟ. ಎರಡು ವರ್ಷಗಳಲ್ಲಿ ಒಂದು ಲಕ್ಷರೂಪಾಯಿ ಸೇರಿಸಿದ. ಈ ಹಣದಿಂದ ಎರಡು ಮಾಳಿಗೆ ಮನೆಗಳನ್ನೂ, ಮೂರು ಎಕರೆ ಹೊಲವನ್ನೂ, ಹೆಂಡತಿಗೆ ಪಟ್ಟೆಸೀರೆ ವಜ್ರಾಭರಣಗಳನ್ನೂ, ಕೊಂಡುಕೊಳ್ಳಬೇಕೆಂದು ಸಿದ್ಧನಾದ. ಆ ಸಮಯಕ್ಕೆ ದೊಡ್ಡದೊಂದು ಸಮಸ್ಯೆ ಅಡ್ಡಬಂದಿತು.

ತಾನು ದೊಡ್ಡ ಶ್ರೀಮಂತನೆಂದು ಗೊತ್ತಾದರೆ, ಇಷ್ಟು ಹಣ ಹೇಗೆ ಬಂತೆಂದು ರಾಜನು ಕೇಳುತ್ತಾನೆ. ಆಗ ಏನು ಹೇಳಬೇಕು ?

ಕೆ. ಕೃಷ್ಣ ಅಯ್ಯರ್

"ಅದಕ್ಕೇನು ? ನಿಮ್ಮ ಸ್ನೇಹಿತರಾದ ಗೋವಿಂದಶೆಟ್ರ ಹತ್ತಿರ ಸಾಲಪಡೆದೆ ಅಂತ ನಾಟಕವಾಡಿದರೆ ಸರಿಯಾಗದೆ ?" ಎಂದು ಶ್ರೀದೇವಮ್ಮ ಹೇಳಿದಳು.

ಗೋಪಾಲಯ್ಯನಿಗೆ ಅದೇ ಒಳ್ಳೆಯದೆನಿಸಿತು. ಅವನ ವಿಶ್ವಾಸದವರಾದ ಗೋವಿಂದಶೆಟ್ರ ಹತ್ತಿರ ಹೋಗಿ, ಎಲ್ಲಾ ವಿಷಯವನ್ನೂ ಹೇಳಿ, "ನಿಮಗೊಂದು ಸುಳ್ಳು ಸಾಲಪತ್ರ ಬರೆದು ಕೊಡುತ್ತೇನೆ. ರಾಜರು ವಿಚಾರಣೆ ನಡೆಸಿದರೆ ನನಗೆ ಸಾಲಕೊಟ್ಟಿದ್ದು ನಿಜವೆಂದು ಹೇಳಿಬಿಡಿ. ಸ್ವಲ್ಪಕಾಲ ಕಳೆದಮೇಲೆ ಆ ಪತ್ರ ಹರಿದು ಹಾಕಿದರಾಯಿತು" ಎಂದನು. ಇದಕ್ಕೆ ಗೋವಿಂದಶೆಟ್ರು ಒಪ್ಪಿದರು.

ಗೋಪಾಲಯ್ಯ ತಾನು ಅನೀತಿಯಿಂದ ಸಂಪಾದಿಸಿದ ಹಣದಿಂದ, ಎರಡು ಭವನಗಳನ್ನೂ ಹೊಲವನ್ನೂ ಕೊಂಡುಕೊಂಡು, ಒಂದು ಭವನದಲ್ಲಿ ತಾನಿರುತ್ತ, ಇನ್ನೊಂದನ್ನು ಬಾಡಿಗೆಗೆ ಕೊಟ್ಟನು. ಹೆಂಡತಿಗೆ ಬೇಕಾದ ಸೀರೆ ಆಭರಣಗಳೂ ಬಂದುವು.

"ಹೊಲದಿಂದ ಧಾನ್ಯ ಬರುತ್ತೆ. ಮೇಲು ಖರ್ಚುಗಳಿಗೆ ಬಾಡಿಗೆಯೂ ಬರುತ್ತೆ. ಇನ್ನು ಕೆಲಸ ಮಾಡುವ ಅಗತ್ಯವೇನಿದೆ ? ರಾಜಾಸ್ಥಾನದ ಕೆಲಸ ಬಿಟ್ಟು ಹಾಯಾಗಿದ್ದು ಬಿಡಿ. ಆಮೇಲೆ ರಾಜರ ಭಯವೂ ನಮಗಿರುವುದಿಲ್ಲ" ಎಂದು ಶ್ರೀದೇವಮ್ಮ ಗೋಪಾಲಯ್ಯನಿಗೆ ಆಲೋಚನೆ ಹೇಳಿದಳು.

ಅದನ್ನೂ ಈಡೇರಿಸಿಕೊಂಡ ಮೇಲೆ, ಒಂದು ದಿನ ಗೋವಿಂದಶೆಟ್ರು ಅಕಸ್ಮಾತ್ತಾಗಿ ತೀರಿಹೋದರು. ಅವರ ಆಸ್ತಿಗೆ ವಾರಸರಾರೂ ಇಲ್ಲದ ಕಾರಣದಿಂದ, ಅದು ರಾಜನಿಗೇ ಸೇರಬೇಕಾಗಿ ಬಂದಿತ್ತು. ರಾಜನ ಉದ್ಯೋಗಸ್ಥರು ಬಂದು ಗೋವಿಂದಶೆಟ್ರ ಸಂಬಂಧದ ಸ್ಥಿರ ಚರಾಸ್ತಿಗಳನ್ನು ವಶಪಡಿಸಿಕೊಂಡರು. ಆಗ ಅನೇಕ ಸಾಲದ ಪತ್ರಗಳೂ ಅವರಿಗೆ ದೊರೆತುವು. ಅವುಗಳೊಂದಿಗೆ ಗೋಪಾಲಯ್ಯ ಬರೆದುಕೊಟ್ಟ ಸಾಲಪತ್ರವೂ ಇತ್ತು.

ಈಗ ಗೋಪಾಲಯ್ಯ ತನ್ನ ಸುಳ್ಳು ಸಾಲದ ಹಣವನ್ನು ರಾಜನಿಗೆ ಕೊಟ್ಟು ತೀರಿಸಬೇಕಾಯಿತು. ಬಡ್ಡಿಯ ಲೆಕ್ಕವೂ ಸೇರಿ ಅದು ಭಾರೀ ಮೊತ್ತವಾಗಿ ಕುಳಿತಿತ್ತು. ಗೋಪಾಲಯ್ಯನ ಹತ್ತಿರ ನಗದು ಹಣವೇನೂ ಇಲ್ಲದಿದ್ದುದರಿಂದ ಅವನ ಸ್ಥಿರ ಚರ ಆಸ್ತಿಗಳೆಲ್ಲವೂ ಜಪ್ತುಮಾಡಿ ಏಲಂ ಹಾಕಿಸಬೇಕಾಯಿತು. ಅವನ ಅನೀತಿಯ ಸಂಪಾದನೆಯ ಸೊತ್ತುಗಳು ಇದ್ದುದನ್ನೂ ಒರೆಸಿಕೊಂಡು ಹೋಯಿತು. ಹೆಂಡತಿಯ ಬುದ್ಧಿಯಿಲ್ಲದ ಆಲೋಚನೆಯಿಂದ ಇದ್ದ ಕೆಲಸವೂ ಇಲ್ಲದಾಗಿತ್ತು. ಅವನಿಗೆ ಭಿಕ್ಷೆಬೇಡುವುದರ ಹೊರತು ಬೇರೆ ದಾರಿ ಇರಲಿಲ್ಲ. ಆ ಕೆಲಸ ಮಾಡಲು ಗೋಪಾಲಯ್ಯ ತನ್ನ ಹೆಂಡತಿಯನ್ನು ಕರೆದುಕೊಂಡು ಇನ್ನೊಂದು ದೇಶಕ್ಕೆ ಹೋದನು.





# ಹಡಗು ತೇಲಿತು

ನಂದೀಪವೆಂಬ ನಗರದಲ್ಲಿ ಹೀರಾದತ್ತನೆಂಬ ಶ್ರೀಮಂತನಾದ ಸಮುದ್ರ ವರ್ತಕನಿದ್ದನು. ಅವನ ಸರಕುಗಳು ದ್ವೀಪಾಂತರಗಳಲ್ಲಿ ಚೆನ್ನಾಗಿ ಓಡುತ್ತಿದ್ದುವು. ದೊಡ್ಡ ದೊಡ್ಡ ಗಿರಾಕಿಗಳು ಅವನ ಸರಕುಗಳಿಗಾಗಿ ಕಾಯುತ್ತಿದ್ದರು. ಅಂತೆಯೇ ಹೀರಾದತ್ತನಿಗೆ ಅಪರಿಮಿತ ಲಾಭವೂ ದೊರೆಯುತ್ತಿತ್ತು. ಶಕುನ ಶುಭಕಾಲ ಮುಂತಾದುವನ್ನು ನೋಡುವುದರಲ್ಲಿ ಒಳ್ಳೆಯ ನಂಬುಗೆಯಿರುವ ಹೀರಾದತ್ತನು, ತಾನು ಸಮುದ್ರವ್ಯಾಪಾರಕ್ಕಿಳಿದುದು ಒಳ್ಳೆಯ ಗಳಿಗೆಯಲ್ಲೇ ಎಂದು ನಂಬುತ್ತಿದ್ದನು.

ನಂದೀಪದಲ್ಲಿ ಇನ್ನೂ ಕೆಲ ಮಂದಿ ವರ್ತಕರೂ ಇದ್ದರು. ಆದರೆ ಅವರು ಹೀರಾದತ್ತನಂತೆ ಹೆಚ್ಚು ಲಾಭ ನೋಡಿದವರಲ್ಲ. ಅವರೆಲ್ಲ ಕಡಿಮೆಯ ಸ್ಥಿತಿಯವರೇ ಆದುದರಿಂದ ಹೀರಾದತ್ತನ ಮೇಲೆ ಅವರಿಗೆಲ್ಲ ಅಸೂಯೆ ಇದ್ದಿತು. ಹೇಗಾದರೂ ಅವನನ್ನು ಕೆಡಿಸಬೇಕೆಂದು ಆಲೋಚನೆ ಮಾಡುತ್ತಿದ್ದರು. ಅಂಥವರಲ್ಲಿ ಮುಖ್ಯನಾದವನು ಹೀರಾದತ್ತನ ದಾಯಾದಿಯೇ ಆದ ಸೋಮದತ್ತನೆಂಬುವನು. ಹೀರಾದತ್ತನಿಗಿರುವ ಮೂಢನಂಬಿಕೆಗಳಿಂದಲೇ ಅವನನ್ನು ನಾಶಮಾಡಬೇಕೆಂದುಕೊಂಡನು. ಆಗೊಮ್ಮೆ ಹೀರಾದತ್ತನು ಅಧಿಕ ಸಂಖ್ಯೆಯಲ್ಲಿ ಸರಕುಗಳನ್ನು ತೆಗೆದುಕೊಂಡು ಸುವರ್ಣದ್ವೀಪಕ್ಕೆ ಹೊರಟನು. ಅದಕ್ಕಾಗಿ ಅವನು ತನಗಿರುವ ಧನದ ಅರ್ಧಭಾಗವನ್ನೆಲ್ಲ ವ್ಯಯಮಾಡಿ ಹಡಗಿನಲ್ಲಿ ತುಂಬಿಸಿಕೊಂಡನು. ಅದೇ ತಕ್ಕ ತರುಣವೆಂದು ಹಿತ ಶತ್ರುವಾದ ಸೋಮದತ್ತನು, ತನ್ನ ಮಿತ್ರರೊಂದಿಗೆ ಮಾತಾಡಿಕೊಂಡು, ನಾವಿಕರನ್ನಾಗಿ ತಮ್ಮ ಕಡೆಯವರನ್ನೇ ಆ ಹಡಗಿಗೆ ಕಳುಹಿಸಿದನು. ಈ ಒಳತಂತ್ರದ ರಹಸ್ಯ ಹೀರಾದತ್ತನಿಗೆ ಸ್ವಲ್ಪ ಕೂಡ ತಿಳಿಯಲಿಲ್ಲ. ಹಡಗು ಸಮುದ್ರದಲ್ಲಿ ಲಂಗರೆತ್ತಿ ಸ್ವಲ್ಪ ದೂರ ಹೋದ ಕೂಡಲೇ ಸೋಮದತ್ತನ ಕಡೆಯವರು ಹಡಗಿಗೆ ತೂತುಗಳನ್ನು ಮಾಡಿ ಸಣ್ಣ ತೆಪ್ಪಗಳನ್ನು ಏರಿಕೊಂಡು ತೀರಕ್ಕೆ ಹೋಗಿಬಿಟ್ಟರು. ಆಮೇಲೆ ಸ್ವಲ್ಪ ಹೊತ್ತಿಗೆ ಆ ಹಡಗು ಮುಳುಗಿ ಹೋಯಿತು. ಹೀರಾದತ್ತನೂ ಅವನ ಕಡೆಯ ಮನುಷ್ಯರೂ ತೆಪ್ಪಗಳ ಮೂಲಕ ಹೇಗೋ ಪೇಚಾಡಿ ಜೀವದೊಂದಿಗೆ ತೀರ ಸೇರಿ ಪಾರಾದರು. ಇದು ಏನೋ ಪ್ರಮಾದವಶದಿಂದ ನಡೆದಿರಬೇಕೆಂದೇ

ಪಿ. ಸಿ. ಸರ್ಕಾರ್, ಇಂದ್ರಜಾಲಿಕರು



ಹೀರಾದತ್ತನಿಗೆ ತೋರಿತ್ತು. ಆದುದರಿಂದ ಹೀರಾದತ್ತನು ಇನ್ನೊಂದು ಸಾರಿ ಸಮುದ್ರ ಪ್ರಯಾಣಕ್ಕೆ ತಯಾರಾದನು. ಈ ಸಾರಿ ಸ್ವಲ್ಪ ಸರಕುಗಳನ್ನು ಮಾತ್ರವೇ ಸಂಗ್ರಹಿಸಲು ಸಾಧ್ಯವಾಯಿತು. ಈ ಸಾರಿ ಕೂಡಾ ಸೋಮದತ್ತನು ಹಳೆಯ ಅದೇ ಉಪಾಯದಿಂದ ಆ ಹಡಗನ್ನೂ ಮುಳುಗಿಸಿಬಿಟ್ಟನು.

ಎರಡನೇ ಬಾರಿ ಕೂಡಾ ಮೊದಲಿನಂತೆಯೇ ಆದುದರಿಂದ ಹೀರಾದತ್ತನು ಆರ್ಥಿಕವಾಗಿಯೂ ಮಾನಸಿಕವಾಗಿಯೂ ಕುಂದಿಹೋದನು. ಇದು ಬಲವಾದ ದುಶ್ಶಕುನವೆಂದು ಅವನಿಗೆ ತೋರಿತು. ಇನ್ನು ತನಗೆ ಈ ಜನ್ಮದಲ್ಲಿ ಸಮುದ್ರವ್ಯಾಪಾರ ಮಾಡುವ ಯೋಗವಿಲ್ಲವೆಂದು ನಿಶ್ಚಯಿಸಿಕೊಂಡನು. ಈ ಚಿಂತೆಯಿಂದ ಅವನು ಮನೋವ್ಯಾಧಿಗೇ ಗುರಿಯಾಗಿಬಿಟ್ಟನು. ಮನೆಯವರೆಲ್ಲ ಚಿಂತಿಸ ತೊಡಗಿದರು. ಅನೇಕ ಮಂದಿ ಮಿತ್ರರು ಹೀರಾದತ್ತನ ನಿರಾಶೆಯನ್ನು ಹೋಗಲಾಡಿಸಲು ಪ್ರಯತ್ನ ಪಟ್ಟರು. ಆದರೆ ಅವನು "ಇಲ್ಲಯಿಲ್ಲ, ನನ್ನ ದಿನಗಳು ಇನ್ನು ಚೆನ್ನಾಗಿಲ್ಲ. ನನ್ನನ್ನು ದುಷ್ಟ ಗ್ರಹಗಳು ಆಕ್ರಮಿಸಿಕೊಂಡಾಯಿತು.' ಇನ್ನು ಮೇಲೆ ನನ್ನ ಹಡಗುಗಳು ನೀರ ಮೇಲೆ ತೇಲಲಾರವು." ಎಂದು ತಲೆಗೆ ಕೈಯಿಟ್ಟುಕೊಂಡನು. ಅವನ ಶತ್ರುಗಳಿಗೆ ಅವನ ನಿಸ್ಪೃಹೆಯನ್ನು ನೋಡಿ ಸಮಾಧಾನವೆನಿಸಿತು.

ನಂದೀಪದ ರಾಜನಾದ ಪ್ರತಾಪ ರಾಜನಿಗೆ ಹೀರಾದತ್ತ ವರ್ತಕನ ಮೇಲೆ ತುಂಬಾ ಅಭಿಮಾನವಿತ್ತು. ಕಾರಣ ದೇಶಾಂತರಗಳಲ್ಲಿ ಆ ರಾಜನ ಹೆಸರು ಮೆರೆಯಲೂ ಹೀರಾದತ್ತನು ಕಾರಣನಾಗಿದ್ದನು. ಹೀರಾದತ್ತನ ದೀನಸ್ಥಿತಿಯನ್ನು ಕುರಿತು ರಾಜನಿಗೆ ಸುದ್ದಿ ತಿಳಿಯಿತು. ಈ ಸಾರಿ ಹೀರಾದತ್ತನು ಸಮುದ್ರ ಪ್ರಯಾಣ ಮಾಡಲು ತಾನೇ ಹಣ ಕೊಡುವುದಾಗಿ ರಾಜನು ಹೇಳಿದನು. ಆದರೆ ಹೀರಾದತ್ತನು ಆಸಕ್ತಿ ತೋರಿಸದೆ, "ತನ್ನ ಹಡಗು ಮುಳುಗುವುದೇ ಖಂಡಿತವೆಂದು ಬಿಟ್ಟನು.

ಆಗ ರಾಜನು ಸಭೆ ಸೇರಿಸಿ ಎಲ್ಲರನ್ನೂ ನೋಡಿ, ಹೀರಾದತ್ತನ ಸಂಗತಿಯನ್ನು ಹೇಳಿ, "ಈ ಪರಿಸ್ಥಿತಿಯಲ್ಲಿ ಹೀರಾದತ್ತನ ಮನಸ್ಸನ್ನು ಪರಿವರ್ತಿಸುವ ಉಪಾಯವಿದೆಯೇ, ಇದ್ದರೆ ಹೇಳಿರಿ" ಎಂದನು. ಯಾರೂ ಮಾತಾಡಲಿಲ್ಲ. ಆದರೆ ಆಸ್ಥಾನದ ಐಂದ್ರಜಾಲಿಕನಾದ ಸೋಮನಾಥನು ಎದ್ದು, "ಮಹಾರಾಜರೆ, ನನಗೆ ಕೆಲವು ದಿನಗಳ ಅವಧಿಕೊಟ್ಟರೆ ನನ್ನ ಇಂದ್ರಜಾಲದ ಮೂಲಕವಾಗಿ ಹೀರಾದತ್ತನ ಮನಸ್ಸನ್ನು ಪರಿವರ್ತಿಸಲು ಪ್ರಯತ್ನ ಮಾಡುತ್ತೇನೆ" ಎಂದನು. ರಾಜನು ಅವನಿಗೆ ಸಮ್ಮತಿಕೊಟ್ಟನು.

ಸೋಮದತ್ತನು ಹೀರಾದತ್ತನ ಮನಸ್ಸನ್ನು ಹಾಳು ಮಾಡಲು ಮಾಡಿದ ತಂತ್ರದಲ್ಲಿ ಒಂದು ಏನೆಂದರೆ, ಅವನೊಬ್ಬ ಸಾಮುದ್ರಿಕ ಶಾಸ್ತ್ರಿಯನ್ನು ಕರೆದು ತಂದು ಹೀರಾದತ್ತನ ಕೈರೇಖೆ ನೋಡಿ

ಜೋಸ್ಯ ಹೇಳಿಸಿದ್ದು. ಹೀರಾದತ್ತನ ಜೀವಿತದಲ್ಲಿ ಇನ್ನು ಮೇಲೆ ಸಮುದ್ರಪ್ರಯಾಣದ ಯೋಗವಿಲ್ಲ ವೆಂದು ಆ ಜೋಯಿಸನ ಮೂಲಕ ಹೇಳಿಸಿದ್ದು. ಅದನ್ನೇ ಹೀರಾದತ್ತ ಗಟ್ಟಿಯಾಗಿ ನಂಬಿದ್ದ.

ಈ ಸಮಾಚಾರ ಐಂದ್ರಜಾಲಿಕನಾದ ಸೋಮ ನಾಥನಿಗೆ ಗೊತ್ತಾಗಿತ್ತು. ಈಗ ಅವನು ಆಸ್ಥಾನದ ಜೋಯಿಸರಾದ ಸಿದ್ಧಾಂತಿಗಳನ್ನು ಹೀರಾದತ್ತನ ಬಳಿಗೆ ಕರೆದುಕೊಂಡು ಬಂದು, ಹೀರಾದತ್ತನ ಜಾತಕ ವನ್ನೂ, ಹಸ್ತರೇಖೆಗಳನ್ನೂ ತೋರಿಸಿದನು. ಸಿದ್ಧಾಂತಿಗಳು ಅವೆರಡನ್ನೂ ಪರಿಶೀಲನೆಮಾಡಿ ಹೀರಾದತ್ತನ ಭವಿಷ್ಯತ್ತು ದಿವ್ಯವಾಗಿರುವುದೆಂದೂ, ಸಮುದ್ರಪ್ರಯಾಣವೂ ಜಯಪ್ರದವಾಗುವುದೆಂದೂ ಹೇಳಿದರು. ಈ ಮೊದಲು ಪರಕೀಯ ಗ್ರಹಗಳ ವಕ್ರತೆಯಿಂದ ಕಷ್ಟನಷ್ಟ ಸಂಭವಿಸಿರಬಹುದೆಂದೂ, ಇನ್ನೇನೂ ಆಗದೆಂದೂ ಹೇಳಿದರು ಸಿಂಧಾತಿಗಳು.

ಆದರೂ ಹೀರಾದತ್ತನು ಎರಡುಸಾರಿ ಭಾರಿ ಪೆಟ್ಟು ತಿಂದುದರಿಂದ, ಸಮುದ್ರ ವ್ಯಾಪಾರಕ್ಕಿಳಿ ಯಲು ಒಪ್ಪಲಿಲ್ಲ. ಅವನು ಸೋಮನಾಥನೊಂದಿಗೆ, "ಸಮುದ್ರದ ಮೇಲೆ ಇನ್ನು ನನಗೆ ಅದೃಷ್ಟವಿಲ್ಲ ವೆಂದೇ ಕಾಣುತ್ತದೆ. ಒಂದುಸಾರಿಯಲ್ಲ, ಎರಡು ಸಾರಿಯೂ ಒಂದೇ ರೀತಿಯಿಂದ ಮುಳುಗಿದೆ. ಸಮ್ಮನೆ ವಿಷಪರೀಕ್ಷೆ ಮಾಡಲಾರೆ. ಚಿಕ್ಕ ವ್ಯಾಪಾರವೇ ಸಾಕಪ್ಪಾ" ಎಂದನು.

"ಈಸಾರಿ ನಾನೇ ನಿಮ್ಮೊಂದಿಗೆ ಬರುತ್ತೇನೆ. ನನಗೆ ಇಂದ್ರಜಾಲ ಗೊತ್ತಿದೆಯೆಂಬ ಸಂಗತಿ ಅರಿತಿದ್ದೀ ರಷ್ಟೆ? ನಾನು ನಿಮ್ಮ ಹಡಗು ಮುಳುಗದಂತೆ ನೋಡಿಕೊಳ್ಳುತ್ತೇನೆ. ಅದೂ ಅಲ್ಲದೆ ಮಹಾ ರಾಜರು ಹಡಗಿಗೆ ರಕ್ಷಕಭಟರನ್ನೂ ಕಳುಹಿಸುತ್ತಾರೆ. ಏನೂ ಭಯವಿಲ್ಲ. ಹೊರಡಲು ಸಿದ್ಧಮಾಡಿಕೊಳ್ಳಿ" ಎಂದ ಸೋಮನಾಥ. "ಇಲ್ಲಯಿಲ್ಲ. ಬೇಡಪ್ಪಾ. ಹಡಗು ಮುಳುಗಲೇ ಬೇಕೆಂದು ನನ್ನ ಹಣೇಲಿ



ಬರೆದಿದ್ದರೆ ಅದನ್ನು ತಡೆಯಲು ಯಾರಿಗೆ ಸಾಧ್ಯ ವಾದೀತು?" ಎಂದು ಹೀರಾದತ್ತ ಕೇಳಿದ.

"ನನ್ನ ಇಂದ್ರಜಾಲವು ವಿಧಿಯ ಬರೆಹವನ್ನೂ ಅಳಿಸುವಂಥಾದ್ದು. ಈ ದಿನ ಸಾಯಂಕಾಲ ನಮ್ಮ ಮನೆಗೆ ಬಂದರೆ ಆ ಸಂಗತಿಯನ್ನು ಕಣ್ಣುಮುಂದೆಯೇ ತೋರಿಸುತ್ತೇನೆ" ಎಂದ ಸೋಮನಾಥ.

ಆ ಪ್ರಕಾರವೇ ಹೀರಾದತ್ತನು ಸೋಮನಾಥನ ಮನೆಗೆ ಹೋದನು. ಸೋಮನಾಥನು ಒಂದು ಲೋಟದಲ್ಲಿ ತುಂಬಾ ನೀರು ತುಂಬಿಸಿ ತಂದು ಹೀರಾದತ್ತನ ಕೈಗೆ ಒಂದು ಸೂಜಿಯನ್ನು ಕೊಟ್ಟು ಅದನ್ನು ನೀರಿನಲ್ಲಿ ಹಾಕಲು ಹೇಳಿದನು. ಸೂಜಿ ನೀರಿನಲ್ಲಿ ಮುಳುಗಿ ಲೋಟದ ಅಡಿಗೆ ಇಳಿಯಿತು. ಸೋಮನಾಥನು ಅದನ್ನು ಹೊರಗೆ ತೆಗೆದು ಹೀರಾ ದತ್ತನ ಕೈಗೆ ಕೊಟ್ಟು, ಅದು ನೀರಿನಮೇಲೆ ತೇಲು ವಂತೆ ಮಾಡಲು ಹೇಳಿದನು. ಹೀರಾದತ್ತನು ಎಷ್ಟು ಪ್ರಯತ್ನಿಸಿದರೂ ಸೂಜಿ ನೀರಿನಲ್ಲಿ ಮುಳುಗಿತು.

ಸೋಮನಾಥನು ತನ್ನ ಮಗನನ್ನು ಕರೆದು ಹೀರಾದತ್ತನಿಗೆ ಫಲಾಹಾರಗಳನ್ನು ಕೊಡುವಂತೆ ಹೇಳಿ, ಮಗನೊಂದಿಗೆ ಅವನನ್ನು ಒಳಗಿನ ಕೋಣೆಗೆ ಕಳುಹಿಸಿದನು. ಹೀರಾದತ್ತನು ಅತ್ತ ಹೋದ ಕೂಡಲೇ ಸೋಮನಾಥನು ಸೂಜಿಯನ್ನು ನೀರ ಪಸೆ ಇಲ್ಲದಂತೆ ಚೆನ್ನಾಗಿ ಒರೆಸಿ, ಸಣ್ಣಗಿನ ಸರಿಗೆಯ ಕೊಕ್ಕೆಯಮೇಲೆ ಸೂಜಿಯನ್ನಿಟ್ಟು, ಹಗುರಾಗಿ ಮೆಲ್ಲನೆ ಲೋಟದ ನೀರಿನಲ್ಲಿ ಬಿಟ್ಟನು. ಸರಿಗೆಯ ಕೊಕ್ಕೆ ನೀರಿನಲ್ಲಿ ಮುಳುಗಿತು, ಸೂಜಿ ನೀರಮೇಲೆ ತೇಲಿತು. ಅದು ಹಾಗೆಯೇ ಇರುವಂತೆ ನೋಡುತ್ತ ಲೋಟದಲ್ಲಿ ಮುಳುಗಿದ ಸರಿಗೆಯ ಕೊಕ್ಕೆಯನ್ನು ನೀರಿನಿಂದೆತ್ತಿ ಅಡಗಿಸಿಟ್ಟನು. ಫಲಾಹಾರ ಮುಗಿಸಿ ಹಿಂದಿರುಗಿದ ಹೀರಾದತ್ತನು ಲೋಟದಲ್ಲಿ ತೇಲುವ ಸೂಜಿಯನ್ನು ನೋಡಿ ಆಶ್ಚರ್ಯದಿಂದ ಸ್ತಂಭಿತನಾಗಿ, "ಓ! ಇದೆಂಥ ಅದ್ಭುತ!" ಎಂದನು.

"ಹೌದು. ನಾನು ಅದ್ಭುತಗಳನ್ನು ಮಾಡುವವನು. ನಾನು ನಿಮ್ಮ ಹಡಗಿನಲ್ಲಿದ್ದರೆ ಅದು ಮುಳುಗಲಿಕ್ಕೆ ಸಾಧ್ಯವೇ ಇಲ್ಲ" ಎಂದ ಸೋಮನಾಥ.

ಹೀಗೆ ತೋರಿಸಿದ ಇಂದ್ರಜಾಲದಿಂದ ಹೀರಾದತ್ತನಲ್ಲಿ ಕುಂದಿಹೋಗಿದ್ದ ಮನಸ್ಸಿನ ಬಲ ಮತ್ತೆ ಕಸುಗೊಂಡಿತು. ಆಮೇಲೆ ಅವನು ಮತ್ತೊಮ್ಮೆ ಸಮುದ್ರ ಪ್ರಯಾಣಕ್ಕೆ ಸಿದ್ಧತೆ ನಡೆಸಿದನು. ರಾಜನ ಧನಸಹಾಯವೂ, ಜನಸಹಾಯವೂ ಅವನಿಗೆ ಸಿಕ್ಕಿತ್ತು. ಈ ಸಾರಿಯ ಪ್ರಯತ್ನದಲ್ಲಿ ಹೀರಾದತ್ತನೊಂದಿಗೆ ಸೋಮನಾಥನು ಇರುವನೆಂದೂ, ಅದರಲ್ಲಿ ರಾಜನ ಪ್ರಸಕ್ತಿಕೂಡಾ ಇದೆಯೆಂದೂ ಯಾರಿಗೂ ತಿಳಿಯದಂತೆ ಜಾಗರೂಕತೆ ವಹಿಸಲಾಗಿತ್ತು. ಏಕೆಂದರೆ ಹಡಗು ಮುಳುಗಲಿಕ್ಕೆ ಬೇರೇನೋ ಕಾರಣವಿರಬೇಕೆಂದು ಸೋಮನಾಥನಿಗೆ ಸಂಶಯವಿತ್ತು. ಅವನ ಸಂಶಯದಂತೆ ಈ ಸಾರಿಕೂಡಾ ನಾವಿಕರನ್ನು ಆರಿಸುವಾಗ, ಸೋಮದತ್ತನ ಕಡೆಯವರು ಮತ್ತೆ ಹಡಗಿಗೆ ಹೊಕ್ಕರು. ಆದರೆ ಹಡಗಿನಲ್ಲಿ ವೇಷ ಬದಲಾಯಿಸಿ ಕೊಂಡಿದ್ದ ಸೋಮನಾಥನೂ ರಾಜಭಟರೂ, ಅರ್ಧರಾತ್ರಿಯಲ್ಲಿ ಹಡಗಿಗೆ ತೂತು ಕೊರೆಯಲು ಯತ್ನಿಸಿದ ದುಷ್ಟರನ್ನು ಬಂಧಿಸಿ, ಹಡಗನ್ನು ಸಂದೀಪದಕಡೆಗೇ ಹಿಂದಿರುಗಿಸಿದರು. ದುಷ್ಟರ ವಿಚಾರಣೆ ರಾಜಸಭೆಯಲ್ಲಿ ನಡೆಯಿತು. ಅವರು ತಮ್ಮನ್ನು ನಿಯೋಗಿಸಿದ ಎಲ್ಲ ವರ್ತಕರ ಹೆಸರನ್ನೂ ಹೇಳಿಬಿಟ್ಟರು. ಸೋಮದತ್ತನೂ ಸಿಕ್ಕಿಬಿದ್ದ, ಅವನಿಗೂ ಅವನ ಅನುಚರರಿಗೂ ತಕ್ಕಂತೆ ಶಿಕ್ಷೆಗಳು ಬಿದ್ದುವು.

ಮತ್ತೆ ಹೀರಾದತ್ತನ ಸಮುದ್ರ ವ್ಯಾಪಾರವು ಸುಗಮವಾಗಿ ಸಾಗಿತು. ಅವನು ಎಂದಿನಂತೆ ದ್ವೀಪಾಂತರಗಳೊಂದಿಗೆ ವ್ಯಾಪಾರ ನಡೆಸುತ್ತ ಒಳ್ಳೆಯ ಸ್ಥಿತಿಗೆ ಬಂದನು.





# ಚಿನ್ನದ ಮಾಯೆ

ಒಂದಾನೊಂದು ಗ್ರಾಮದಲ್ಲಿ ಸಿದ್ದಪ್ಪನೆಂಬ ರೈತನಿದ್ದ. ಅವನು ತನಗಿರುವ ಸ್ವಲ್ಪಮಾತ್ರ ಹೊಲದಲ್ಲಿ ವ್ಯವಸಾಯ ಮಾಡಿಕೊಂಡು ಸಿಕ್ಕಿದ ಆದಾಯದಲ್ಲಿ ಕುಟುಂಬ ಪೋಷಣೆ ಮಾಡಿಕೊಂಡಿದ್ದ. ಒಂದು ವರ್ಷ ವಿಪರೀತ ಮಳೆ ಸುರಿದುರಿಂದ ಬೆಳೆ ಪೂರಾ ಕೊಳೆತು ನಾಶವಾಯಿತು. ಅದರಿಂದ ಅವನು ವೀರಾಚಾರಿಯ ಹತ್ತಿರ ಸಾಲ ಮಾಡಬೇಕಾಯಿತು. ವೀರಾಚಾರಿ ತುಂಬ ಜಾಣನಾದ ಚಿನಿವಾರನಾಗಿದ್ದ. ಅದರೊಂದಿಗೆ ಬಡ್ಡಿಯ ಲೇವಾದೇವಿಕೂಡಾ ನಡೆಸುತ್ತಿದ್ದ.

ಕೆಲವು ತಿಂಗಳ ನಂತರ, ಸಿದ್ದಪ್ಪನ ಬಂಧುವರ್ಗದ ಹೆಂಗುಸೊಬ್ಬಳು ಸಾಯುವಾಗ, ತನಗಿರುವ ಚಿನ್ನಗಳಲ್ಲಿ ಸ್ವಲ್ಪಭಾಗ ಸಿದ್ದಪ್ಪನಿಗೆ ಸಿಗುವಂತೆ ಬರೆದಿಟ್ಟು ಸತ್ತಿದ್ದಳು. ಆ ಚಿನ್ನ ಸಿದ್ದಪ್ಪನ ಕೈಗೆ ಬಂದಕೂಡಲೇ, ಸಿದ್ದಪ್ಪ ವೀರಾಚಾರಿಯ ಸಾಲವನ್ನು ಕೊಟ್ಟು ತೀರಿಸಿದನು. ಆಗ ಸಿದ್ದಪ್ಪನ ಹೆಂಡತಿ ಸ್ವಲ್ಪ ಚಿನ್ನವನ್ನು ವೀರಾಚಾರಿಗೆ ಕೊಟ್ಟು ತನಗೆ ನಗ ಮಾಡಿಸಿಕೊಂಡಳು. ಜಾಣ ವೀರಾಚಾರಿ ಆ ಚಿನ್ನಕ್ಕೆ ಅರ್ಧಕ್ಕರ್ಧ ತಾಮ್ರ ಬೆರೆಸಿದ್ದ ನಗ ಮಾತ್ರ ಅತ್ಯದ್ಭುತವಾಗಿತ್ತು. ವೀರಾಚಾರಿಯ ಮಗಳು ಸಂಕ್ರಾಂತಿ ಹಬ್ಬಕ್ಕೆ ತೌರುಮನೆಗೆ ಬಂದಿದ್ದಳು. ಸಿದ್ದಪ್ಪನ ಕುಟುಂಬವು ಈಗ ಒಳ್ಳೆಯ ಸ್ಥಿತಿಯಲ್ಲಿರುವುದನ್ನು ತಿಳಿದು, ಅವಳು ಸಿದ್ದಪ್ಪನ ಮನೆಗೆ ನೋಡಲು ಬಂದಳು. ಸಿದ್ದಪ್ಪನ ಹೆಂಡತಿ ತನ್ನ ಹೊಸ ನಗವನ್ನು ಅವಳಿಗೆ ತೋರಿಸಿದಳು.

ವೀರಾಚಾರಿಯ ಮಗಳು ಆ ನಗದ ಕಲಾಕೌಶಲಕ್ಕೆ ಮಾರುಹೋಗಿ, ತನ್ನ ತಂದೆಯ ಹತ್ತಿರ ಬಂದು, "ಏನಪ್ಪಾ, ನಾನು ಎಷ್ಟು ಹೇಳಿದರೂ ನನಗೆ ಅಷ್ಟೊಂದು ಚಂದವಾಗಿ ನಾಜೂಕಾಗಿ ನಗ ಮಾಡಿ ಕೊಡಲಿಲ್ಲ. ಸಿದ್ದಪ್ಪನ ಹೆಂಡತಿಗೆ ಎಷ್ಟು ಚೆಂದಮಾಡಿ ಕೊಟ್ಟಿರುವಿರಿ ? ನನ್ನ ಗೋಲುಸನ್ನು ಅಳಿಸಿ ನಾನು ಹೋಗುವುದರೊಳಗೆ ಅಂತಹ ನಗವನ್ನೇ ಮಾಡಿ ಕೊಡಬೇಕು. ಇಲ್ಲದಿದ್ದರೆ ಸಿದ್ದಪ್ಪನ ಹೆಂಡತಿಯ ನಗವನ್ನೇ ತೆಗೆದುಕೊಂಡು ಹೋಗುತ್ತೇನೆ. ಆಮೇಲೆ ನೀವು ಅವಳಿಗೆ ಅಷ್ಟೇ ತೂಕದ ಅದೇ ನಗವನ್ನು ಮಾಡಿ ಕೊಟ್ಟುಬಿಡಿ" ಎಂದಳು.

ವೀರಚಾರಿ ಚೇಳು ಕುಟುಕಿದ ಕಳ್ಳನಂತೆ, ಕೂಡಲೇ ತನ್ನ ಮಗಳಿಗೆ ಅಂತಹ ನಗವನ್ನು ಮಾಡಿಕೊಟ್ಟನು. ಅವನು ಆಗತ್ಯ ಕೆಲಸಕ್ಕಾಗಿ ಬೇರೆ ಊರಿಗೆ ಹೋಗ

ಎಂ. ಎಸ್. ನಾರಾಯಣ

ಬೇಕಾಗಿದ್ದುದರಿಂದ, ಅವಸರವಾಗಿ ನಗವನ್ನು ಮಾಡಿ ಕೊಟ್ಟು ಹೋದನು. ವೀರಾಚಾರಿಯ ಮಗಳು ಆ ದಿನ ರಾತ್ರಿ ಆ ನಗವನ್ನು ತೆಗೆದುಕೊಂಡು ಸಿದ್ದಪ್ಪನ ಮನೆಗೆ ಹೋದಳು. ಸಿದ್ದಪ್ಪನ ಹೆಂಡತಿ ಅವಳ ಹೊಸ ನಗವನ್ನು ನೋಡಿ ಮೆಚ್ಚಿದಳು. ಆದರೆ ವೀರಾ ಚಾರಿಯ ಮಗಳಿಗೆ ಸಿದ್ದಪ್ಪನ ಹೆಂಡತಿಯ ನಗವೇ ಚೆನ್ನಾಗಿರುವಂತೆ ತೋರಿತು. ಊರಿಗೆ ಹೊರಡುವ ಅವಸರದಲ್ಲಿ ಅಪ್ಪ ಶ್ರದ್ಧೆಯಿಂದ ಮಾಡಲಿಲ್ಲವೆನಿಸಿತು.

ಆದುದರಿಂದ ವೀರಾಚಾರಿಯ ಮಗಳು ಸಿದ್ದಪ್ಪನ ಹೆಂಡತಿಯೊಂದಿಗೆ, "ನಮ್ಮ ನಗವನ್ನು ಬದಲಾಯಿಸಿ ಕೊಳ್ಳೋಣವೆ? ನಿಮ್ಮ ನಗ ಹೆಚ್ಚಿಗೆ ಭಾರವಿದ್ದರೆ ಆ ಅಂಶದ ಹಣಕೊಡುತ್ತೇನೆ. ನನ್ನದು ಹೆಚ್ಚಿಗೆ ಭಾರವಿದ್ದರೆ ನೀವೇನೂ ಕೊಡಬೇಕಾಗಿಲ್ಲ" ಎಂದಳು.

ದಾಕ್ಷಿಣ್ಯದವಳಾದ ಸಿದ್ದಪ್ಪನ ಹೆಂಡತಿ ಅದಕ್ಕೆ ಒಪ್ಪಿಬಿಟ್ಟಳು. ಇಬ್ಬರೂ ವೀರಾಚಾರಿಯ ಮನೆಗೆ ಹೋದರು. ವೀರಾಚಾರಿ ಊರಿಗೆ ಹೋಗಿರುವುದರಿಂದ ವೀರಾಚಾರಿಯ ಹೆಂಡತಿ ನಗವನ್ನು ತೂಕ ಮಾಡಿದಳು. ವೀರಾಚಾರಿಯ ಮಗಳ ನಗವೇ, ಒಂದು ಗುಂಜೀ ತೂಕ ಹೆಚ್ಚಾಗಿದ್ದುದರಿಂದ ನಗಗಳನ್ನು ಅಲ್ಲಿಯೇ ಬದಲಾಯಿಸಿಕೊಂಡರು.

ಮರುದಿನ ವೀರಾಚಾರಿಯ ಮಗಳು ತನ್ನ ಗಂಡನ ಮನೆಗೆ ಹೊರಟುಹೋದಳು. ಅವಳ ಗಂಡ ಆ ನಗವನ್ನು ಒರೆಸಿ ನೋಡಿದಾಗ ಅದು ತಾಮ್ರದ ನಗವೆಂದು ತಿಳಿಯಿತು. ಕೂಡಲೇ ಅವನು ವೀರಾಚಾರಿಯ ಬಳಿಗೆ ದಡದಡನೆ ಬಂದು, ಜಗಳ ತೆಗೆದನು.

ತಾನು ತನ್ನ ಮಗಳಿಗೆ ಉತ್ತಮವಾದ ಚಿನ್ನದ ನಗವನ್ನು ಮಾಡಿಕೊಟ್ಟದ್ದು ಎಲ್ಲಿ ಹೋಯಿತೆಂದು ತಿಳಿಯದೆ ಬೆರಗಾದ ವೀರಾಚಾರಿ ಸಿದ್ದಪ್ಪನ ಹೆಂಡತಿಯ ನಗ ತನ್ನ ಮಗಳ ಕೈಗೆ ಹೇಗೆ ಬಂತೆಂದು ಗೊತ್ತಾಗದೆ ವಿಸ್ಮಿತನಾದನು. ತನ್ನ ಹೆಂಡತಿಯನ್ನು ಕರೆದು "ನಮ್ಮ ಹುಡುಗಿ ನಗದೊಂದಿಗೆ ಸಿದ್ದಪ್ಪನ ಮನೆಗೆ ಹೋಗಿದ್ದಳೇ?" ಎಂದು ಕೇಳಿದ. ಆ ಸಂಗತಿ ಹೇಳಿಬಿಟ್ಟರೆ ಗಂಡನಿಗೆ ಸಿಟ್ಟು ಬರುತ್ತದೆಂದುಕೊಂಡು ಅವನ ಹೆಂಡತಿ ಇಲ್ಲವೆಂದು ಹೇಳಿಬಿಟ್ಟಳು.

ವೀರಾಚಾರಿ ತನ್ನ ಅಳಿಯನಿಗೆ ಕ್ಷಮಾಪಣೆ ಹೇಳಿಕೊಂಡು, ತನ್ನ ಮರ್ಯಾದೆ ಕಾಪಾಡಿಕೊಳ್ಳಲು ತಾನು ಅಪಹರಿಸಿದ ಸಿದ್ದಪ್ಪನ ಚಿನ್ನದಿಂದ ನಗಮಾಡಿ ಕೊಡುತ್ತೇನೆಂದು ಭರವಸೆಕೊಟ್ಟನು. "ಬೇಡ ಮಾವಯ್ಯ, ಮತ್ತೆ ಅದೇ ಅಭ್ಯಾಸದ ಕೆಲಸವಾದೀತು. ವ್ಯಾಪಾರದ ರಹಸ್ಯ ನನಗೆ ಗೊತ್ತಿಲ್ಲವೇ? ನಾನೂ ನಿಮ್ಮ ಹಾಗೆ ತಾನೇ? ಚಿನ್ನ ಕೊಟ್ಟುಬಿಡಿ. ನಾನೇ ಮಾಡಿಕೊಳ್ಳುತ್ತೇನೆ" ಎಂದು ಹೇಳಿ ಅಳಿಯ ಚಿನ್ನವನ್ನು ತೆಗೆದುಕೊಂಡುಹೋದನು.





# ಪ್ರತೀಕಾರ

ಅನೇಕ ಶತಮಾನಗಳ ಕೆಳಗೆ ಉತ್ತರ ಭಾರತದ ಮೇಲೆ ಆಗಾಗ ವಿದೇಶೀಯರ ದಂಡಯಾತ್ರೆ ನಡೆಯುತ್ತಿದ್ದುವು. ಹೋರಾಟಗಳು ದಾರುಣವಾಗಿಯೂ ಅಮಾನುಷವಾಗಿಯೂ ಇದ್ದುವು. ಒಮ್ಮೊಮ್ಮೆ ದಾಳಿಗಾರರು ಭಾರತದ ದುರ್ಗಗಳನ್ನು ಭೇದಿಸುತ್ತಿದರು. ಒಂದೊಂದು ಸಾರಿ ಪರಾಜಿತರಾಗುತ್ತಿದ್ದರು.



ಬಾಗ್ದಾದಿನಲ್ಲಿರುವ ಖಲೀಫನಿಗೆ ಪ್ರತಿನಿಧಿಯಾಗಿ ಅಲ್ ಹಜಾಜನು ಟರ್ಕಿ, ಇರಾನ್ ದೇಶಗಳನ್ನು ಪಾಲಿಸುತ್ತಿದ್ದನು. ಅವನು ಸಿಂಧು ರಾಷ್ಟ್ರದ ಮೇಲೆ ತನ್ನ ಸೈನಿಕರಿಂದ ಅನೇಕ ಸಾರಿ ದಂಡೆತ್ತಿಸಿದನು. ಆದರೆ ಪ್ರತಿಸಾರಿಯೂ ಅವರು ಸೋತುಹೋದರು. ಆಗ ಸಿಂಧು ರಾಜನಾಗಿ ದಹೀರನಿದ್ದನು.





ಕಟ್ಟಕಡೆಗೆ ಅಲ್ ಹಜಾಜನ ಅಳಿಯ ಮಹಮ್ಮದ್ ಕಾಸೀಂ ಸೇನಾಧಿಪತಿಯಾದನು. ಅವನು ಬುದ್ಧಿವಂತನೂ ಸಾಹಸಿಯೂ ಆದವನು. ಅವನು ದೀರ್ಘವಾಗಿ ಹೋರಾಡಿ ಸಿಂಧು ರಾಜನ ದುರ್ಗವನ್ನು ಭೇದಿಸಿಬಿಟ್ಟನು.



ರಾಜನೂ ರಾಜಕುಮಾರರೂ ಸತ್ತುಹೋದ ಮೇಲೆ, ರಾಣಿಯೂ, ಆಕೆಯ ಸೊಸೆಯಂದಿರೂ ಚಿತಿಯನ್ನು ಪೇರಿಸಿ ಆದರಲ್ಲಿ 'ಜೋಹಾರ್' ಮಾಡಿಕೊಂಡರು.



ಆದರೆ ರಾಜಕುಮಾರಿಯರಿಬ್ಬರು ಅಗ್ನಿಗೆ ಆಹುತಿ ಯಾಗುವುದರೊಳಗೆ ಕಾಸಿಮನ ಕೈಗೆ ಸಿಕ್ಕಿಬಿದ್ದರು. ಅವರು ಅತ್ಯಂತ ಸುಂದರಿಯರು.

ಸೇನಾಧಿಪತಿ ರಾಜನ ಬೊಕ್ಕಸವನ್ನು ಕೊಳ್ಳೆ ಹೊಡೆದು ಸ್ವದೇಶಕ್ಕೆ ಹೊರಟನು. ರಾಜ ಕುಮಾರಿಯರಿಬ್ಬರನ್ನೂ ತನ್ನ ಜತೆಯಲ್ಲಿ ಕರೆದುಕೊಂಡು ಹೋದನು–ಬಹಳ ಸಂತೋಷ ವಾಗಿತ್ತು ಅವನಿಗೆ.





ಸೇನಾಧಿಪತಿ ಕಾಸಿಂ ಆ ರಾಜಕುಮಾರಿಯ ರನ್ನು ತನ್ನ ಮಾವನಾದ ಅಲ್ ಹಜ್ಜಾಜನಿಗೆ ಸಮರ್ಪಿಸಿದನು. ಅವನು ಅವರಿಬ್ಬರನ್ನೂ ಖಲೀಫನಬಳಿಗೆ ಕಳುಹಿಸಿದನು. ಖಲೀಫಾ ಅವರ ಸೌಂದರ್ಯಕ್ಕೆ ಮುಗ್ಧನಾಗಿ ಅವರನ್ನು ತನ್ನ ಜನಾನಾದಲ್ಲಿರಿಸಿ, ಸೇನಾಧಿಪತಿಯನ್ನು ಒಂದು ದೂರ ಪ್ರಾಂತಕ್ಕೆ ಪಾಲಕನನ್ನಾಗಿ ಮಾಡಿ ಕಳುಹಿಸಿದನು.

ಕೆಲವು ದಿನಗಳು ಕಳೆದ ಮೇಲೆ ಖಲೀಫನು ತಾನು ಆ ರಾಜಕುಮಾರಿಯರನ್ನು ಮದುವೆ ಯಾಗುವೆನೆಂದು ಪ್ರಕಟಿಸಿದನು. ಆಗ ರಾಜ ಕುಮಾರಿಯರಿಬ್ಬರೂ, ತಮ್ಮಿಬ್ಬರನ್ನೂ ದಾರಿ ಯಲ್ಲಿ ಸೇನಾಧಿಪತಿ ಮದುವೆ ಮಾಡಿಕೊಂಡ ನೆಂದು ಹೇಳಿ, "ತಮ್ಮ ಹೆಂಡಂದಿರನ್ನು ತಮ್ಮ ಯಜಮಾನರಿಗೆ ಬಹುಮಾನ ಕೊಡುವುದು ನಿಮ್ಮ ದೇಶದ ವಾಡಿಕೆಯೇ?" ಎಂದು ಕೇಳಿದರು.





ಖಲೀಫಾ ಉಗ್ರನಾಗಿ ದೂರ ಪ್ರಾಂತದ ಪಾಲಕನಾಗಿದ್ದ ಕಾಸೀಂನನ್ನು ಹಿಡಿದುಕೊಂಡು ಬರುವಂತೆ ತನ್ನ ಭಟರನ್ನು ಕಳುಹಿಸುತ್ತ "ಜೀವದಿಂದಲ್ಲ, ನಾನು ಅವನ ಶವವನು ನೋಡುತ್ತೇನೆ!" ಎಂದನು.



ಖಲೀಫನ ಆಜ್ಞೆ ನೆರವೇರಿಬಿಟ್ಟಿತು. ಕಾಸೀಮನ ಶವ ಖಲೀಫನ ಮುಂದೆ ತಂದು ಇಡಲ್ಪಟ್ಟಿತು. ಅದನ್ನು ನೋಡಿ ರಾಜಕುಮಾರಿಯರು "ಖಲೀಫರೇ, ಈ ಸೇನಾಧಿಪತಿ ನಮ್ಮನ್ನು ಮುಟ್ಟಲೂ ಇಲ್ಲ. ನಮ್ಮ ತಂದೆ ತಾಯಿಯರನ್ನೂ ನಮ್ಮ ವಂಶವನ್ನೂ ನಾಶಮಾಡಿದವನ ಮೇಲೆ ನಾವು ಹಗೆ ತೀರಿಸಿಕೊಂಡು ಸಂತೃಪ್ತರಾದೆವು, ಅಷ್ಟೇ!" ಎಂದರು.



ಮೋಸಹೋದ ಖಲೀಫಾ ಕೋಪದಿಂದ ಕಿರುಚಿ ಕ್ರೂರನಾಗಿ ರಾಜಕುಮಾರಿಯರನ್ನು ಕೊಲ್ಲಿಸಿದನು. ಅದಕ್ಕೆ ಅವರು ಸಿದ್ಧರಾಗಿಯೇ ಇದ್ದರು. ಕಾಸೀಮನನ್ನು ಕೊಲ್ಲಿಸಿದ ಚಿಂತೆಯಿಂದ ಬೆಂದು ಬೇಗದಲ್ಲೇ ಖಲೀಫನೂ ಸತ್ತುಹೋದನು.

# ಕಥಾ ಶೀರ್ಷಿಕೆಯ ಸ್ಪರ್ಧೆ

## ಈ ಕಥೆಗೆ ಒಳ್ಳೆಯ ಶೀರ್ಷಿಕೆಯನ್ನು ಇಟ್ಟು ರೂ. ೨೫ ಗೆಲ್ಲಿರಿ!

?

ಹಸನ್ ಮತ್ತು ಆಲೀ ಎಂಬಿಬ್ಬರು ಆರೇಬಿಯಾದವರು ಒಂದು ಮೇಕೆಯ ವಿಷಯದಲ್ಲಿ ತಕರಾರಿಗೆ ಬಿದ್ದರು. ಇಬ್ಬರೂ ಆ ಮೇಕೆ ತನ್ನದೆಂದೇ ಹೇಳುತ್ತಿದ್ದರು. ಎಷ್ಟಕ್ಕೂ ಬಗೆಹರಿಯದಿರಲು ಅಕ್ಕ ಪಕ್ಕದಲ್ಲಿದ್ದವರು ಅವರಿಬ್ಬರನ್ನೂ ನ್ಯಾಯಾಧಿಕಾರಿ ಜುಹಾನ ಬಳಿಗೆ ಕರೆದೊಯ್ದು ಫಿರ್ಯಾದಿ ಮಾಡಿಸಿದರು.

"ಏನು ನಿಮ್ಮ ತಕರಾರು ?" ಎಂದು ಜುಹಾ ಕೇಳಿದ.

"ಸಾಹೇಬರೇ, ಈ ಮೇಕೆ ಚಿಕ್ಕತನದಿಂದಲೂ ನನ್ನ ಹತ್ತಿರವೇ ಬೆಳೆಯಿತು. ಅದನ್ನು ನಾನೇ ಬೆಳೆಸಿದೆ. ಒಂದು ದಿನ ಅದು ಆಕಸ್ಮಾತ್ತಾಗಿ ಮಾಯವಾಯಿತು. ಹುಡುಕಿದಾಗ ಅದು ಈ ಪಾಪಿಷ್ಠ ಮುಖದ ಆಲೀಯ ಮನೆಯೊಳಗಿತ್ತು. ಕದ್ದೆಯಾ ಕಳ್ಳ ಅಂತ ಕೇಳಿದರೆ ನಾನೇ ಅವನ ಮೇಕೆಯನ್ನು ಕದ್ದೆನೆನ್ನುತ್ತಾನೆ, ಸುಳ್ಳಿನ ಪಿಂಡದವ!" ಎಂದ ಹಸನ್.

ಅಲೀ ಕೂಡಾ ಆ ಮೇಕೆ ಚಿಕ್ಕತನದಿಂದ ತನ್ನ ಬಳಿಯಲ್ಲೇ ಬೆಳೆಯಿತೆಂದೂ, ಈ ನಡುವೆ ಹಸನ್ ಕದ್ದನೆಂದೂ ಹೇಳಿದ.

ಜುಹಾ ಇಬ್ಬರ ಮುಖವನ್ನೂ ಪರೀಕ್ಷಿಸಿ ನೋಡಿ, "ಇಬ್ಬರು ವ್ಯಕ್ತಿಗಳು ದೀರ್ಘಕಾಲ ಕೂಡಿಕೊಂಡಿದ್ದರೆ ಇಬ್ಬರಿಗೂ ಪರಸ್ಪರರ ಹೋಲಿಕೆ ಬರುವ ವಿಷಯ ಎಲ್ಲರಿಗೂ ಗೊತ್ತಿದೆ. ಅಲೀ ಮುಖ ನೋಡಿ! ಮೇಕೆಯ ಮುಖದ ಪ್ರತಿ ಅಚ್ಚು! ಮೇಕೆ ಆಲೀಯದೇ" ಎಂದು ಅಲ್ಲಿ ಸೇರಿದವರ ಎದುರಿನಲ್ಲಿ ತೀರ್ಪು ಹೇಳಿ, ತನ್ನ ಕತ್ತೆಯನ್ನೇರಿಕೊಂಡು ಹೋಗಿಬಿಟ್ಟ.

ಹಸನ್ ಅತ್ಯಂತ ಕೋಪದಿಂದ ಜುಹಾನನ್ನು ನೋಡುತ್ತ, "ನಿಜವೇ ಮತ್ತೆ! ಅದಕ್ಕೇ ಆ ಎರಡು ವ್ಯಕ್ತಿಗಳಲ್ಲಿ ಯಾವುದು ಕತ್ತೆಯೋ ಗೊತ್ತಾಗುವುದಿಲ್ಲ!" ಎಂದನು.

★ ★ ★

ಮೇಲಿನ ಕಥೆಗೆ ಒಳ್ಳೆಯ ಹೆಸರನ್ನು ಆಲೋಚನೆ ಮಾಡಿ, ಪೋಸ್ಟುಕಾರ್ಡಿನಲ್ಲಿಯೇ ನಿಮ್ಮ ಹೆಸರು ವಿಳಾಸದೊಂದಿಗೆ ಬರೆದು "ಕಥಾ ಶೀರ್ಷಿಕೆಯ ಸ್ಪರ್ಧೆ" ಚಂದಮಾಮ, ೨ & ೩ ಆರ್ಕಾಟ್ ರೋಡು, ವಡಪಳನಿ, ಮದ್ರಾಸು - ೬೦೦೦೨೬ ಎಂಬ ವಿಳಾಸಕ್ಕೆ ಕಳುಹಿಸಿರಿ.

ಇದು ಏಪ್ರಿಲ್ ೧೫ ರೊಳಗೆ ತಲಪಬೇಕು. ಅದರಲ್ಲಿ "ಫೋಟೋ ಶೀರ್ಷಿಕೆಯ ಸ್ಪರ್ಧೆ" ಬರೆದಿರಬಾರದು. ಫಲಿತಾಂಶ '೭೭ ಜೂನ್ ಚಂದಮಾಮದಲ್ಲಿ ಪ್ರಕಟವಾಗುತ್ತದೆ.

---

ಫೆಬ್ರವರಿಯ ಸ್ಪರ್ಧೆಯ ಫಲಿತಾಂಶ: ಗುಂಪಿಗೆಲ್ಲಾ ಒಬ್ಬನ ಬುದ್ಧಿ ಸಾಕು

ಕಳುಹಿಸಿದವರು: ಸತ್ಯವತಿ, C/o. ಕೆ. ಎನ್. ವಿಶ್ವೇಶ್ವರಯ್ಯ, ಗ್ರಾಮ ಲೇಖಾಧಿಕಾರಿಗಳು, ಬಾಗೂರು, ಚೆನ್ನರಾಯ ಪಟ್ಟಣ, ಹಾಸನ್ ಜಿಲ್ಲಾ.

# ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

## ಗೆದ್ದ ಶೀರ್ಷಿಕೆಗಳು ೧೯೭೭ ಜೂನ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



T. V. Seshagiri



D. N. Shirke

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಏಪ್ರಿಲ್ ೧೫ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು - ೬೦೦೦೨೬

---

## ಫಿಬ್ರವರಿಯ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: **ಯಾರದೋ ಯಾರಿಗೋ**

ಎರಡನೇ ಫೋಟೋ: **ನನ್ನದೇ, ನನಗೇ**

ಕಳುಹಿಸಿದವರು: **ನಾಗರಾಜ ಪಾಟೀಲ,**

S/o. ಜಿ. ವಿ. ಪಾಟೀಲ, ಹೊಸಮನೆ ಬಡಾವಣೆ, ಶಿವಮೊಗ್ಗ

**Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras 600 026 : Controlling Editor : NAGI REDDI**


ರಾಮ ಶ್ಯಾಮರು ಮತ್ತು
ವಿಮಾನ ಕಳ್ಳ


ರಾಮ ಶ್ಯಾಮರು ಪುನಃ ರಜಾದಿನಗಳಲ್ಲಿ
ಪಯಣ ಹೊರಟರು ವಿಶೇಷ ವಿಮಾನದಲ್ಲಿ


ಯಾರೋ 'ಹಲ್ಲೋ' ಅಂದನು,
ಮೋಜಿಗೆ ಭಂಗವ ತಂದನು
ಅವನೆ ವಿಮಾನ ಕಳ್ಳನು,
ಪಿಸ್ತೂಲ್ ಹಿಡಿದೇ ನಿಂತನು.


'ನಾವೂ ಅವನ ಹಿಂದೆಯೆ ಹೋಗುವಾ,
ನಮ್ಮಿಂದಾದ ಸಹಾಯ ಮಾಡುವಾ.'


ಕಳ್ಳನ ಬೆನ್ನ ಹಿಂದೆ ಪಿಸ್ತೂಲ್
ಹಿಡಿದಿಹ ಭಾವನೆ
ಪಿಸ್ತೂಲ್ ಅಲ್ಲ ಪಾಪಿನ್ಸ್ ಪ್ಯಾಕ್
ಜಾಣ ರಾಮನ ಯೋಚನೆ.


ಪೈಲಟ್ ಕೂಡಲೇ ಪಿಸ್ತೂಲ್ ಕಸಿದನು
ಅದೋ ಕಳ್ಳ ಪಲಾಯನಕೆ ತಯಾರಾದನು


ರಾಮ ಶ್ಯಾಮರು ಎಲ್ಲರನ್ನೂ ಅಪಾಯದಿಂದ
ರಕ್ಷಿಸಿದರು, ಎಲ್ಲರೂ ಹೊಗಳಿದರು
'ಪಾಪಿನ್ಸ್ ಹೀರೋ' ಎಂದರು.




PARLE
POPPINS
MIXED FRUITY SWEETS





# ಮಾಯಾಸರೋವರ

April 1977

೧೫

[ಕಳ್ಳರರಾಣಿಗೆ ಶತ್ರುವಾದ ಗಡೇಗುಡ್ಡ ಎಂಬವನು ಒಬ್ಬ ಮನುಷ್ಯನಿಂದ ನರವಾನರದ ಮೂಲಕ ಜಯ ಪಡೆಯಲು ಪ್ರಯತ್ನಿಸುತ್ತಿದ್ದನು. ನರವಾನರವನ್ನು ಪಳಗಿಸುವ ಮನುಷ್ಯ ತನ್ನ ಶತ್ರು ಕೃಪಾಣ ಚಿತ್ತುವೆಂದು ಜಯಶೀಲನಿಗೆ ಗೊತ್ತಾಯಿತು. ಜಯಶೀಲನು ಬಿಟ್ಟ ಬಾಣವು ನರವಾನರವನ್ನು ತಾಗಿತು. ಅದೇ ವೇಳೆಗೆ ಕಳ್ಳರ ಸೇನಾನಿ ತನ್ನವರೊಂದಿಗೆ ಶತ್ರುಗಳ ಮೇಲೆ ದಾಳಿ ತೆಗೆದನು.]

...ಳ್ಳರ ರಾಣಿಯ ಸೈನಿಕರು ಬೆಟ್ಟದ ಮೇಲಕ್ಕೆ ...ಬರುವುದನ್ನು ನೋಡುತ್ತಲೇ, ರಾಣಿಯ ...ವಾದ ಕಳ್ಳ ಜನಾಂಗದ ಅಧಿಪತಿ ಗಡೇ...ನು. ತನ್ನ ಭಟರೆಲ್ಲರೂ ಬೆಟ್ಟದ ಮೇಲೆ ಬರು... ಅವಸರದಿಂದ ಕೂಗಿಕೂಗಿ ಆಜ್ಞೆ ಮಾಡಿದನು. ...ಕಡೆಯ ಕಳ್ಳಸೈನಿಕರು ಭಲ್ಲೆಯನ್ನು ಕುಣಿಸುತ್ತಾ ...ವೇಶದ ಕೂಗುಗಳೊಂದಿಗೆ ಬೆಟ್ಟದ ಮೇಲಕ್ಕೆ ...ಡಗಿದರು.

... ಸಮಯದಲ್ಲಿ ಹುಚ್ಚು ಹುಚ್ಚಾಗಿ ಹಾರುತ್ತಿ... ನರವಾನರವನ್ನು ಅಡಗಿಸಲಿಕ್ಕಾಗಿ ಕೃಪಾಣ ಚಿತ್ತುವೂ, ಮತ್ತೆ ಕೆಲವಂದಿ ಕಳ್ಳರೂ ಹೆಣಗಾಡಿಕೊಂಡಿದ್ದರು. ಅವರಿಗೀಗ ಹೊರಗಿನ ಶತ್ರುಗಳೊಂದಿಗೆ ನರವಾನರವೊಂದು ದೊಡ್ಡ ಕಂಟಕವಾಗಿತ್ತು. ಕಳ್ಳರು ಅದರ ಕೈಕಾಲುಗಳೆಡೆಗೆ ಸಿಕ್ಕಿ ಘಾಸಿಗೊಳ್ಳುತ್ತಿದ್ದರೂ ಧೈರ್ಯದಿಂದ ಅದನ್ನು ಹಿಂಸಿಸುತ್ತಿದ್ದರು.

ಜಯಶೀಲನು ನಿಂತಲ್ಲೇ ಇದ್ದು, ಬೆಟ್ಟದ ಇನ್ನೊಂದು ಕಡೆಯಿಂದ ಮೇಲೆ ಬರುತ್ತಿದ್ದ ಗಡೇಗುಡ್ಡನ ಕಡೆಯವರನ್ನು ನೋಡಿ ಸಿದ್ಧಸಾಧಕನೊಂದಿಗೆ, "ಸಾಧಕಾ, ನಾವೀಗ ರಾಣಿಯ ಸೈನಿಕರಿಗೆ



ಸಹಾಯಮಾಡದೆ ಹೋದರೆ, ಅವಳ ಶತ್ರುಗಳು ಅವಳ ಕಡೆಯುವರನ್ನೆಲ್ಲ ಸುಲಭವಾಗಿ ಹತಮಾಡುವರೆಂದೇ ಕಾಣುತ್ತದೆ. ಕೃಪಾಣಜಿತ್ತು ಹಾಕಿಕೊಂಡ ವೇಷ ನೋಡಿದೆಯಾ? ಆಟವಿಕರ ಹಾಗೆ ಪೋಷಾಕು ಧರಿಸಿಕೊಂಡಿದ್ದಾನೆ. ಆದರೂ ಅವನ ಕಂಠಸ್ವರದಿಂದ ಅವನನ್ನು ಗುರುತಿಸಿಬಿಟ್ಟೆ. ಅವನೂ ನನ್ನ ಗುರುತು ಹಿಡಿದಿರುವನೋ ಏನೋ?" ಎಂದನು. "ಅವನಿಗೆ ಆ ನರವಾನರದಿಂದ ತನ್ನನ್ನು ಕಾಪಾಡಿಕೊಳ್ಳುವುದೇ ಪೇಚಾಟವಾಗಿದೆ!" ಎಂದು ಸಿದ್ಧಸಾಧಕನು ನಕ್ಕನು.

ಸಿದ್ಧಸಾಧಕನಿಗಂತೂ ನೋಡುತ್ತಾ ಸುಮ್ಮನಿರುವುದು ಚೆನ್ನಾಗಿಲ್ಲವೆಂದೇ ತೋರಿತು. ರಾಣಿಯ ಸೈನಿಕರಿಗೆ ಸಹಾಯಮಾಡುವುದೇ ಒಳ್ಳೆಯದೆನಿಸಿತು. ಅವನು ರಾಣಿಯನ್ನು ನೋಡುತ್ತ, "ರಾಣೀ, ನೀನು ಇಲ್ಲಿದ್ದುಕೊಂಡೇ ನೋಡುತ್ತಿರು. ನಾವು ನಿನ್ನ ಸೈನಿಕರಿಗೆ ಸಹಾಯಕರಾಗಿ ಹೋಗಿ, ನಿನ್ನ ಶತ್ರುವಾದ ಆ ಕುಳ್ಳರ ಗುಂಪನ್ನೂ, ಕೃಪಾಣಜಿತ್ತುವನ್ನೂ ಒಂದೊಂದು ಕೈ ನೋಡುತ್ತೇವೆ. ನೀನು ವುದೇ ಕ್ಷೇಮ" ಎಂದನು.

ಅಷ್ಟರಲ್ಲಿ ಬೆಟ್ಟದ ಮೇಲಿನಿಂದ ನರವಾನ ದಿಕ್ಕುಗಳು ಸೀಳುವಂತೆ ಕರ್ಕಶವಾಗಿ ಕೂಗಿ ಅದಕ್ಕೇನಾಯಿತೆಂದು ಜಯಶೀಲನೂ ಸಾಧಕನೂ ಅತ್ತ ನೋಡಿದರು. ಥಕ್ಕನೆ ಹಾರಾಟ ನಿಂತುಹೋಗಿತ್ತು.

ಅದರ ನಡುವಿಗೆ ಕಟ್ಟಿದ್ದ ಕಬ್ಬಿಣದ ಸರಪಳಿ ಕೃಪಾಣಜಿತ್ತು ಒಬ್ಬನೇ ಹಿಡಿದುಕೊಂಡಿದ್ದ. ತೇಕುತ್ತಾ, ನೆಟ್ಟಗೆ ನಿಂತುಕೊಂಡು, ಆಗಾಗ ಕೆಳಗಡೆಯನ್ನು ನೋಡಿ ಭುಜ ಕೆರೆದುಕೊ ಕೂಗುತ್ತಿದ್ದಿತು. ಕೃಪಾಣಜಿತ್ತುವನ್ನು ನೋಡಿ ಭಯವಾಗುವುದೂ, ಅವನ ಮುಂದೆ ಅದು ವಂತದ ವಿಧೇಯತೆಯಲ್ಲಿರುವುದೂ, ಆದರೆ ಆಜ್ಞೆಯಂತೆ ನಡೆಯಲು ಅದಕ್ಕೆ ಕಷ್ಟವಾಗು ಅರ್ಥವಾಗುತ್ತಿತ್ತು.

"ಸಾಧಕಾ, ನರವಾನರವು ಮತ್ತೆ ಅವನ ಬಂತು ಪಾಪ. ಇನ್ನು ಅದು ಅವನು ಹೇಳಿದ ಕೇಳುತ್ತದೆ. ಆದೀಗ ಅವನು ಹೇಳಿದಂತೆ ಬಂಡೆಯನ್ನು ಕೆಳಗೆ ಹಾಕಿಬಿಟ್ಟರೆ, ರಾಣಿಯ ರಲ್ಲಿ ಅರ್ಧಕ್ಕಿಂತಲೂ ಹೆಚ್ಚು ಮಂದಿ ಸಾಯು ಏನಾದರೂ ಮಾಡಿ ಆ ನರವಾನರಕ್ಕೆ ಭಯ ಹುಟ್ಟಿಸಬೇಕು. ಉಂ, ಬೇಗ ಬಾ!" ಜಯಶೀಲನು ಬೆಟ್ಟದಮೇಲಕ್ಕೆ ಹಾರಿಹಾರಿ ತೊಡಗಿದನು. "ಜೈ ಮಹಾಕಾಳಾ!" ಸಿದ್ಧಸಾಧಕನೂ ಅವನನ್ನು ಅನುಸರಿಸಿ ಓಡಿದ.

ಇಬ್ಬರೂ ತೀವ್ರಗತಿಯಿಂದ ಹೋಗಿ, ಬೆಟ್ಟದ ಮೇಲಕ್ಕೆ ತಲಪಲು ತುಸುದೂರದ ಕುಳ್ಳರ ಸೇನಾಪತಿಯು ಬಳಿಗೆ ತಲಪಿ, " ಪತಿಯೇ, ನಿನ್ನ ಭಟರನ್ನು ಸ್ವಲ್ಪ ನಿಲ್ಲುವಂತೆ ನರವಾನರವು ಮತ್ತೆ ನಿಮ್ಮ ಮೇಲೆ ದೊಡ್ಡ

ಲ್ಲು ಬಿಸುಡುವ ಅಪಾಯವಿದೆ ನೋಡು!" ಎಂದರು.

"ಅಯ್ಯಾ, ನೀವು ಆ ಭಯಂಕರವಾದ ಪರ್ವತ ಣಿಯಿಂದಲೂ, ಆ ಮಹಾಕಾಯ ಮಾನವ ದಲೂ ಗಂಡಾಂತರವಾಗದಂತೆ ನೋಡಿಕೊಂಡರೆ ಕು. ನಾವು ಹೋಗಿ ಅಲ್ಲಿ ನಿಂತಿರುವ ಗಡೇಗುಡ್ಡ ನ್ನೂ ಅವನ ಬಂಟರನ್ನೂ ನಮ್ಮ ಭಲ್ಲೆಗಳಿಗೆ ಬಲಿ ಟ್ಟು, ಬೆಟ್ಟದ ಕಣಿವೆಗೆ ಎಸೆದುಬಿಡುತ್ತೇವೆ. ವರೆಲ್ಲ ನಮಗೆ ಹುಲ್ಲಿನ ಸಮಾನದವರು. ತ್ತಿಂದೂ ಅವರು ಇಂಥ ದುಷ್ಟತನ ಮಾಡಲಿಕ್ಕಿಲ್ಲ." ದ ಕಳ್ಳರ ಸೇನಾಧಿಪತಿ.

"ಭಲೇ ಭಲೇ! ನಿನ್ನ ಶೂರತನದ ಮಾತುಗಳೂ. ಲ್ಲೆಗಳ ಮೊನೆಗಳೂ ಚೆನ್ನಾಗಿವೆಯಾದರೂ, ದುಡುಕಿ ದ ಅಪಾಯವಾಗಬಾರದಷ್ಟೇ? ನೀನು ನೆನೆದ ಲ್ಲಾ ನೆನೆಸಿದಂತೆಯೇ ಆಗಲಿಕ್ಕೆ ನೀನು ದೇವಜಾತಿಯ ನೋ ರಾಕ್ಷಸ ಜಾತಿಯವನೋ ಅಲ್ಲವಷ್ಟೇ? ಲ್ಲದಕ್ಕೂ ಒಂದು ಮಿತಿ ಬೇಕು. ನೀವೆಲ್ಲಾ ಧಾರಣ ಕಳ್ಳ ಜನಾಂಗವೆಂಬುದೂ ನೆನಪಿರಲಿ!" ಎಂದು ತುಸು ಕೋಪದಿಂದ ಹೇಳಿದ ಸಿದ್ಧಸಾಧಕ. ಜಯಶೀಲನು, ಹಾಗೆ ಕೋಪ ಮಾಡುವುದು ಒಳಿತಲ್ಲವೆಂದು ಅವನಿಗೆ ಕೈ ಸನ್ನೆ ಮಾಡಿದನು. ಅದೇ ಹೊತ್ತಿಗೆ ಕೃಪಾಣಜಿತ್ತುವಿನ ಆಜ್ಞೆಯಂತೆ ನರ ವಾನರವು ದೊಡ್ಡದೊಂದು ಬಂಡೆಯ ತುಂಡನ್ನು ಎತ್ತಿಕೊಂಡಿತು.

ಅದನ್ನು ನೋಡಿ ಸಿದ್ಧಸಾಧಕನು ಕೋಪದಿಂದ ಹುಬ್ಬುಗಂಟು ಹಾಕಿಕೊಂಡು: "ಛೀ ಛೀ! ಈ ವಾನರಕ್ಕೆ ಕಲ್ಲುಬಿಸುಡುವುದೊಂದರ ಹೊರತು ಮತ್ತಾವ ವಿದ್ಯೆಯೂ ಗೊತ್ತಿಲ್ಲವೇನೋ? ಬಿಸುಡಲಿಕ್ಕಾದರೂ ಅದಕ್ಕೆ ಒಂದು ಗುರಿಯೂ ಇಲ್ಲ. ನನ್ನ ಶೂಲದಿಂದ ಒಂದೇ ತಿವಿತಕ್ಕೆ ಅದು ನೆಲಕಚ್ಚುವಂತೆ ಮಾಡಿ ಬಿಡುತ್ತೇನೆ ನೋಡಿರಿ!" ಎನ್ನುತ್ತಾ ಶೂಲವನ್ನೆತ್ತಿ ಆ ವಾನರದ ಕಡೆಗೆ ಧಾವಿಸಿ ಹೋದನು.

ಸಿದ್ಧಸಾಧಕನು ಆವೇಶಗೊಂಡು ದುಸ್ಸಾಹಸಕ್ಕೆ ಹೋಗಿ ಪ್ರಾಣಕ್ಕೆ ತಂದುಕೊಳ್ಳುವನೆಂದು ಜಯಶೀಲನಿಗೆ ತೋರಿತು. ಅವನು ಸಿದ್ಧಸಾಧಕನಿಗೆ





"ನಿಲ್ಲು!" ಎಂದು ಗರ್ಜಿಸಿ ಹೇಳಿ, ಬಿಲ್ಲಿಗೆ ಬಾಣ ಹೂಡಿ ನರವಾನರಕ್ಕೆ ಬಿಟ್ಟನು.

ಬಾಣವು ಗುರಿ ತಪ್ಪಿ ಕೃಪಾಣಜಿತ್ತುವಿನ ಕೈಯಲ್ಲಿದ್ದ ಕಬ್ಬಿಣದ ಸಂಕಲೆಗೆ ತಾಗಿತು. ಆ ಏಟಿಗೆ ಸಂಕಲೆ ಅವನ ಕೈಯಿಂದ ಜಾರಿ ಠಣಠಣನೆ ಕೆಳಗೆ ಬಿತ್ತು. ಕೂಡಲೇ ನರವಾನರವು ಕಲ್ಲನ್ನು ಅಲ್ಲೇ ಕೆಳಗೆ ಹಾಕಿ ಓಡಿಹೋಯಿತು. ಆದರೆ ಕೃಪಾಣಜಿತ್ತು ಹಾರಿ ಸಂಕಲೆಯನ್ನು ಎತ್ತಿಕೊಂಡು ನರವಾನರವನ್ನು ಹಿಂದಕ್ಕೆ ಎಳೆದನು. ಆಗಲೇ ತನ್ನ ಮೇಲೆ ಬಾಣ ಪ್ರಯೋಗ ಮಾಡಿದವನು ಯಾರೆಂಬುದನ್ನು ನೋಡಿ, ಏನೋ ಗುರುತು ಹಿಡಿದವನಂತೆ "ಓಹೋ! ಇವನೋ!" ಎಂದ ತನಗೆತಾನೇ.

ಈ ನೆನಪು ಬಲವಾದಂತೆ ಭಯದಿಂದಲೂ ಆಶ್ಚರ್ಯದಿಂದಲೂ ಅವನು ನಡುಗತೊಡಗಿದನು. ನಿಮಿಷದವರೆಗೂ ಅವರಾರೋ ಸಾಧಾರಣ ಮನುಷ್ಯರೆಂದೇ ತಿಳಿದಿದ್ದನು. ಆ ಜಯಶೀಲ ಇಂಥಾ ಸ್ಥಳಕ್ಕೆ ಬರುವುದೆಂದರೇನು? ಯಾವ ಕಾರ್ಯಕ್ಕಾಗಿ ಇಲ್ಲಿಯವರೆಗೆ ಬಂದಿದ್ದಾನೆ? ಅವನ ಜತೆಯಲ್ಲಿ ಕ್ರೂರನಂತೆ ಕಾಣುವ ಸಿದ್ಧಸಾಧಕನನ್ನು ಅವನು ಇದುವರೆಗೂ ಕಂಡಿರಲಿಲ್ಲ. ಜಯಶೀಲನೊಂದಿಗೆ ಆ ಮಂತ್ರವಾದಿಯಂತಹನನ್ನು ಕಂಡು ಅವನಿಗೆ ಇನ್ನಷ್ಟು ಹೆದರಿಕೆಯೇ ಆಯಿತು.

ಮರು ನಿಮಿಷದಲ್ಲಿ ಅವನು ತನ್ನ ಭಯವನ್ನು ಹೊರಗೆ ಹಾಯಗೊಡದೆ ಸಮಾಳಿಸಿಕೊಂಡು ಕಳ್ಳರ ನಾಯಕ ಗಡೇಗುಡ್ಡನನ್ನು ನೋಡಿ, "ಗಡೇಗುಡ್ಡ! ಇದೀಗ ಶತ್ರುಗಳನ್ನು ಹತಮಾಡಲು ಪಕ್ವವಾದ ಸಮಯವಲ್ಲ. ಅಲ್ಲಿ ಬಿಲ್ಲುಬಾಣ ಹಿಡಿದವನು ದೂರದಿಂದಲೇ ನಮ್ಮೆಲ್ಲರ ಪ್ರಾಣಗಳನ್ನೂ ತೆಗೆಯಬಲ್ಲನು. ನರವಾನರವು ಮೃಗವಾದುದರಿಂದ ಬಾಣದೇಟು ತಗಲಿದರೂ ತಾಳಿಕೊಂಡೀತು. ಇಂಥಾ ಏಟಿಗೆ ನಮ್ಮಂಥವರು ಸಾಯುವುದೇ ಸರಿ!" ಎನ್ನುತ್ತಾ ಕೃಪಾಣಜಿತ್ತು ನರವಾನರವನ್ನು ಬೆಟ್ಟದ ಆಚೆ ಬದಿಗೆ ಎಳೆದೊಯ್ಯುವ ಪ್ರಯತ್ನಮಾಡಿದನು. ಅವನ ಮಾತು ಕೇಳಿ ಗಡೇಗುಡ್ಡನಿಗೂ ಭಯವಾಯಿತು.

ಗಡೇಗುಡ್ಡನು ಜಯಶೀಲ ಸಿದ್ಧಸಾಧಕರ ಕಡೆಗೆ ಸಂದೇಹದಿಂದ ನೋಡಿ ಕೃಪಾಣಜಿತ್ತುವನ್ನು ಕುರಿತು, "ಅಯ್ಯಾ, ಮಹಾಕಾಯ! ನಿಮ್ಮ ಅಭಿಪ್ರಾಯವನ್ನು ಅಲ್ಲವೆನ್ನಲಾರೆ. ಆದರೆ ನೀವು ನರವಾನರದೊಂದಿಗೆ ಒಂದೇ ರಭಸಕ್ಕೆ ಹೋಗಿ ಆ ಬಿಲ್ಲುಬಾಣ ಹಿಡಿದವನನ್ನು ಕೊಲ್ಲಲು ಸಾಧ್ಯವಿಲ್ಲವೆ? ನಾವು ಅದೇ ಸಮಯದಲ್ಲಿ ದುಷ್ಟ ರಾಣಿಯ ಸೈನಿಕರನ್ನೆಲ್ಲಾ ನಮ್ಮ ಭಲ್ಲೆಗಳಿಗೆ ಬಲಿಹಾಕಿ ಚೆಲ್ಲಿಬಿಡುತ್ತೇವೆ. ನಮಗಿರುವ ಎರಡುಪಾಲು ಶಕ್ತಿ ಸಾಹಸಗಳು ನಿಮಗೂ ಇದ್ದೀತಲ್ಲವೇ?" ಎಂದನು.

ಕೃಪಾಣಜಿತ್ತು ಗಡೇಗುಡ್ಡನನ್ನು ಕಣ್ಣು ಕೆರಳಿಸಿ ನೋಡಿ, ನರವಾನರವನ್ನು ಬೆಟ್ಟದ ಕೆಳಗಡೆಗೆ ಎಳೆಯುತ್ತ, "ನನ್ನನ್ನು ಏನೆಂದುಕೊಂಡೆಯೋ ಗಡೇ

ಗುಡ್ಡಾ? ನಿನ್ನ ತಲೆಯ ಮೇಲಿರುವ ಗರಿಗಳ ರಾಜನಾದ ರಣಹದ್ದೂ ಎಂದುಕೊಂಡೆಯಾ? ಆಕಾಶದಲ್ಲಿ ಹೋಗಿ ಅವರಮೇಲೆ ಬೀಳುವುದೆಂತೆ? ಈ ಕೋತಿ ಪುರಾಣದ ಹನುಮಾನನೂ ಅಲ್ಲ. ಎಲ್ಲಾ ಒಂದೇಬಾರಿಗೆ ಆಗಬೇಕೆಂಬ ಅವಸರಕ್ಕೆ ಇದು ಬಾಳೇ ಹಣ್ಣು ಎಂದುಕೊಂಡೆಯಾ? ಸುಮ್ಮನೆ ತಲೆಹರಟೆ ಬೇಡ. ಅವರನ್ನು ಕೊಲ್ಲಲು ಬೇರೆ ಉಪಾಯವಿದೆ. ಸುಮ್ಮನೆ ಹರಟದೆ ಮೊದಲು ನೀವೆಲ್ಲಾ ಜೀವದೊಂದಿಗೆ ಓಡಿಹೋಗಿ ನಿಮ್ಮ ನಿಮ್ಮ ಗುಡಾರ ಸೇರಿಕೊಳ್ಳಿ. ಗೊತ್ತಾಯಿತೇ?" ಎಂದನು.

ಗಡೇಗುಡ್ಡ ಮತ್ತೇನೂ ಉಪಾಯಗಾಣದೆ, ತನ್ನ ಅನುಚರರಿಗೆ ಬೆಟ್ಟವಿಳಿದು ತಮ್ಮ ಕೇರಿಗೆ ಹೋಗಲು ಆಜ್ಞೆ ಮಾಡಿದನು. ಆ ಕೂಡಲೇ ಅವನ ಟಗರು ರಾವುತರೂ, ಭಲ್ಲೆಗಳ ವೀರರೂ ಬೇಗಬೇಗನೇ ಬೆಟ್ಟವನ್ನಿಳಿಯ ತೊಡಗಿದರು.

ಹೀಗೆ ಶತ್ರುಗಳು ಓಡಿಹೋಗುವುದನ್ನು ನೋಡಿ ಜಯಶೀಲನು ಕುಳ್ಳರ ಸೇನಾಪತಿಯೊಂದಿಗೆ, "ತ್ವರೆ ಮಾಡು ಸೇನಾಧಿಪತೀ! ಇದೇ ನಿನಗೆ ಸರಿಯಾದ ಸಮಯ. ಸಮೀಪದವರ ಮೇಲೆ ಭಲ್ಲೆಗಳನ್ನು ಪ್ರಯೋಗಿಸಿರಿ. ದೂರದವರ ಮೇಲೆ ಬಂಡೆಗಳನ್ನು ಉರುಳಿಸಿರಿ. ಅನೇಕ ಶತ್ರುಗಳನ್ನು ಪರಲೋಕಕ್ಕೆ ಕಳುಹಿಸಬಹುದು. ತೋರಿಸಿರಿ ನಿಮ್ಮ ಚುರುಕುತನ" ಎಂದು ಹುರಿದುಂಬಿಸಿದನು.

ಶತ್ರುಗಳು ತಾವಾಗಿ ಬೆನ್ನು ಕೊಟ್ಟು ಓಡುವುದರಿಂದ ಕುಳ್ಳರ ಸೇನಾಧಿಪತಿಗೆ ಇನ್ನಿಷ್ಟು ಧೈರ್ಯ ಉಂಟಾಯಿತು. ಅವನು ತನ್ನ ಭಟರಿಗೆ ಜೋರಿನಿಂದ ಆಜ್ಞೆ ಮಾಡುತ್ತ, "ಓ ವೀರಶೂರ ಗಡೇಕಾರಿ ಭಟರೇ! ಹೆಬ್ಬುಲಿಗಳ ಹಾಗೆ, ರಣಸಿಂಗಗಳ ಹಾಗೆ ನಮ್ಮ ದ್ರೋಹಿಗಳು ಗಡೇಗುಡ್ಡನ ಗುಂಪಿನವರನ್ನು ನಮ್ಮ ಭಲ್ಲೆಗಳಿಂದ ಸೀಳಿರಿ! ಭಲ್ಲೇ ಕುಳ್ಳ ಮಲ್ಲರಿರಾ! ಭಯಂಕರ ಮೃಗ ಓಡಿಹೋಗುತ್ತಿದೆ!



ಅದರ ಭಯ ನಮಗಿಲ್ಲ. ಓಡಿರಿ! ಹಿಡಿಯಿರಿ! ಪುಡಿ ಹಾರಿಸಿರಿ!" ಎಂದು ಜೋರಾಗಿ ಹೇಳಿದನು.

ತಮ್ಮ ನಾಯಕನ ಮಾತುಗಳಿಂದ ಕುಳ್ಳರಾಣಿಯ ಭಟರೆಲ್ಲರೂ ಉತ್ಸಾಹಗೊಂಡು ದೊಡ್ಡ ದನಿಯಿಂದ ವೀರಗರ್ಜನೆ ಮಾಡುತ್ತ ಬೆಟ್ಟದಮೇಲಕ್ಕೆ ಹೋದರು. ಅಲ್ಲಿ ಅವರಿಗೆ ಓಡಿ ಹೋಗುತ್ತಿರುವ ಟಗರುರಾವುತರೂ ಭಲ್ಲೆಯ ಭಟರೂ ಸಿಕ್ಕಿದರು. ರಾಣಿಯ ಭಟರು ಅವರನ್ನು ಭಲ್ಲೆಗಳಿಂದ ತಿವಿದು ಇಳಿಜಾರಾಗಿರುವ ಬೆಟ್ಟದಲ್ಲಿ ಹೊರಳಿಸ ತೊಡಗಿದರು. ಕುಳ್ಳರ ಸೇನಾಧಿಪತಿ ಭಲ್ಲೆಯನ್ನು ಎತ್ತಿ ಹಿಡಿದು ತನ್ನ ಟಗರು ವಾಹನವನ್ನು ಅತ್ತಿತ್ತ ಓಡಿಸುತ್ತ ಭಟರನ್ನು ಉತ್ಸಾಹಪಡಿಸುತ್ತಿದ್ದನು. ಅವರ ಟಗರುಗಳೂ ಈ ಬಗೆಯ ಯುದ್ಧದಲ್ಲಿ ಒಳ್ಳೇ ನುರಿತ ಸೊಕ್ಕಿನವುಗಳೇ.

ಹಾಗೆ ಕುಳ್ಳಕುಳ್ಳರ ಗುಂಪಿನ ನಡುವೆ ಯುದ್ಧವು ನಡೆಯುತ್ತಿದ್ದಾಗ, ಜಯಶೀಲನೂ ಸಿದ್ಧಸಾಧಕನೂ



ಅಲ್ಲಿಗೆ ಹೋಗಿ ನಿಂತರು. ಅಲ್ಲಿ ಅವರು ಆಚೆಕಡೆ ನೋಡಿದಾಗ, ಗಡೇಗುಡ್ಡನ ಅನುಚರರೊಂದಿಗೆ ನರವಾನರವನ್ನು ಎಳೆದುಕೊಂಡು ಹೋಗುತ್ತಿರುವ ಕೃಪಾಣಜಿತ್ತು ಕೂಡಾ ಕಾಣಿಸಿದನು.

ಸಿದ್ಧಸಾಧಕನು ಶೂಲವನ್ನು ಎತ್ತಿ ಹಿಡಿದು, "ಜೈ ಮಹಾಕಾಳಾ!" ಎಂದು ಗುಡ್ಡಬೆಟ್ಟಗಳು ನಡುಗುವಂತೆ ಕೂಗಿ "ಜಯಶೀಲಾ! ನೋಡುತ್ತೀ ಏನು? ಆಗೋ ಅಲ್ಲಿ ಮರಗಳ ಗುಂಪಿನೆಡೆಯಲ್ಲಿ ಕಾಣುವುದೇ ಈ ಗಡೇಗುಡ್ಡನ ಕಡೆಯವರ ಕೇರಿ. ನಾವು ಹೋಗಿ ಹಠಾತ್ತಾಗಿ ಅದರ ಮೇಲೆ ಬಿದ್ದು ಕೃಪಾಣಜಿತ್ತನ್ನೂ, ಅವನ ಆಟದ ಕೋತಿಯನ್ನೂ, ಗಡೇಗುಡ್ಡನ ಕುಳ್ಳರ ಗುಂಪನ್ನೂ ನೆಲ ಸಮಮಾಡಿ ಬಂದುಬಿಡೋಣ. ಅವರೆಲ್ಲ ಚೆನ್ನಾಗಿ ಹೆದರಿ ಮುದುಡಿರುವ ಈ ಸಮಯವೇ ಸರಿಯಾದ ಸಮಯ! ಒಂದೇ ಬಾರಿಗೇ ದೊಡ್ಡ ವಿಜಯ!" ಎಂದನು. ಸಿದ್ಧಸಾಧಕನ ಹುಚ್ಚು ಉತ್ಸಾಹದ ಮಾತು ಕೇಳಿ ಜಯಶೀಲನು ಕಿರುನಗೆ ನಕ್ಕು. "ಶತ್ರುಗಳ ಬಲವನ್ನು ಹತ್ತಿಯಹಾಗೆ ಎಣಿಸುವುದು ಎಂದಿಗೂ ಒಳ್ಳೆಯದಲ್ಲ. ಅವರನ್ನು ಇಲ್ಲಿಂದ ಹೆದರಿಸಿ ಓಡಿಸುವುದಕ್ಕೂ, ಅವರ ಕೇರಿಯಮೇಲೆ ಬಿದ್ದು ಕೊಲ್ಲುವುದಕ್ಕೂ ತುಂಬಾ ವ್ಯತ್ಯಾಸವಿದೆ. ಆದೂ ಅಲ್ಲದೆ ನಮಗೆ ಈ ಗಡೇಗುಡ್ಡಂದಿರ ಮೇಲೆ ಹಗೆ ತೀರಿಸುವಂತಹ ಕಾರಣವೂ ಇಲ್ಲ, ಅಗತ್ಯವೂ ಇಲ್ಲ. ಸಾಧ್ಯವಾದರೆ ಅವರಿಗೂ ಕುಳ್ಳರಾಣಿಗೂ ಏನಾದರೂ ರಾಜಿಯಾಗುವ ಪ್ರಯತ್ನ ಮಾಡಿ ನೋಡಬಹುದು. ಅದನ್ನೇ ಆಲೋಚನೆ ಮಾಡುತ್ತಿದ್ದೇನೆ" ಎಂದನು.

"ಹಾಗಾದರೆ ನಮ್ಮ ಶತ್ರುವಾದ ಕೃಪಾಣಜಿತ್ತುವಿನ ಸಮಾಚಾರ ಹೇಗೆ? ಅವನು ಪಳಗಿಸುತ್ತಿರುವ ನರವಾನರದ ಸಂಗತಿ ಏನು? ಅದರ ಸಹಾಯದಿಂದ ಆ ದುಷ್ಟನು ಈ ಸುತ್ತುಮುತ್ತಲೂ ಇರುವ ಸಾವಿರ ಹರದಾರಿ ಪ್ರಾಂತಗಳಿಗೆಲ್ಲಾ ಚಕ್ರವರ್ತಿಯಾದಾನು. ಇದನ್ನೆಲ್ಲ ನಾವು ನೋಡುತ್ತಾ ಸುಮ್ಮನಿರುವುದು ಹೇಗೆ?" ಎಂದ ಸಿದ್ಧಸಾಧಕ.

ಜಯಶೀಲನು ಅವನಿಗೆ ಏನೋ ಹೇಳಬೇಕೆಂದಿರಲು, ಕುಳ್ಳರ ಸೇನಾಧಿಪತಿ ಅವನ ಮುಂದೆ ಬಂದು. "ಅಯ್ಯಾ, ನಿಮ್ಮ ಅಪ್ಪಣೆಯಾದರೆ, ನಿಮ್ಮ ಸಹಾಯವೂ ದೊರೆತರೆ. ನಾವೆಲ್ಲಾ ಈಗ ಬೆಟ್ಟ ಇಳಿದು ಹೋಗಿ ಗಡೇಗುಡ್ಡನ ಕೇರಿಯೊಳಗೆ ನುಗ್ಗಿ ಶತ್ರುಗಳನ್ನು ಬೇರುಸಹಿತವಾಗಿ ಕಿತ್ತು ನಾಶಮಾಡಿ ಬಂದು ಬಿಡುತ್ತೇವೆ. ಏನು ನಿಮ್ಮ ಅಜ್ಞೆ?" ಎಂದು ಕೇಳಿದನು.

ಜಯಶೀಲನು ಸುತ್ತಲೂ ಒಂದುಬಾರಿ ನೋಡಿ, ಆ ಸೇನಾಧಿಪತಿಯ ಬೆನ್ನು ತಟ್ಟುತ್ತ, "ಕುಳ್ಳವೀರ ಸೇನಾಧಿಪತಿಯೇ! ನಿನ್ನ ಧೈರ್ಯವೂ ಸಾಹಸಗಳೂ ಮೆಚ್ಚತಕ್ಕದ್ದೇ. ಇಲ್ಲಿ ಕೈಗೆ ಸಿಕ್ಕಷ್ಟು ಶತ್ರುಗಳನ್ನು ಕೊಂದಿರುವಿರಿ. ಉಳಿದವರೂ ನರವಾನರ ಸಹಿತವಾಗಿ ಕೇರಿ ಸೇರಿಕೊಂಡಿದ್ದಾರೆ. ಇದೆಲ್ಲವೂ ನಿಮಗೆ ಜಯವೇ

ಇನ್ನೂ ದಾಳಿಮಾಡಿದರೆ ಅನಾವಶ್ಯಕವಾಗಿ ಘಾತವಾಗುತ್ತದೆ. ಅಷ್ಟೇಹೊರತು ಅದರಿಂದ ನಷ್ಟ ವಿಜಯವೆಂಬ ಹರ್ಷಕ್ಕೇನೂ ಸತ್ವ ಉಳಿವುದಿಲ್ಲ" ಎಂದನು.

"ಹಾಗಾದರೆ ನಾವು ಈಗ ಏನು ಮಾಡಬೇಕೆಂದು ಆಜ್ಞೆ?" ಎಂದು ಕೇಳಿದ ಕುಳ್ಳರ ನಾಯಕ.

"ನೀವೆಲ್ಲರೂ ಬೆಟ್ಟದಿಂದಿಳಿದು ನಿಮ್ಮ ರಾಣಿಯ ಬಳಿಗೆ ಹೋಗಿರಿ. ಆಮೇಲೆ ನಿಮ್ಮ ಕೇರಿಗೆ ತಕ್ಕ ರಕ್ಷಣೆಯನ್ನು ಮಾಡಿಕೊಳ್ಳಿ. ನಮಗೆ ಬಂದಂತಹ ಯೋಚನೆಯೇ ಶತ್ರುಗಳಿಗೂ ಬಂದಿರುವುದೆಂದು ತಿಳಿರಿ. ಅವರು ಹಠಾತ್ತಾಗಿ ನಿಮ್ಮಮೇಲೆ ಬಂದು ಬೀಳದಂತೆ ತಕ್ಕ ಜಾಗ್ರತೆಯಲ್ಲಿರಿ. ಹೋಗಿರಿ. ಇಬ್ಬರೂ ಬೇಗದಲ್ಲೇ ನಿಮ್ಮ ಕೇರಿಗೆ ಬರುತ್ತೇವೆ." ಎಂದ ಜಯಶೀಲ.

ಕುಳ್ಳರ ಸೇನಾಧಿಪತಿ ಜಯಶೀಲ ಸಿದ್ಧಸಾಧಕರಿಗೆ ದಾರಿ ತೋರಿಸಲು ಒಬ್ಬ ಕುಳ್ಳಭಟನನ್ನು ಅಲ್ಲಿ ಬಿಟ್ಟು ಉಳಿದವರೊಂದಿಗೆ ಹೊರಟನು. ಎಲ್ಲರೂ ವಿಜಯಧ್ವಾನಗಳನ್ನು ಮಾಡುತ್ತ ಬೆಟ್ಟದಿಂದ ಇಳಿದು ತಮ್ಮ ರಾಣಿಯ ಬಳಿಗೆ ಹೋದರು.

ಜಯಶೀಲನು ಗಡೇಗುಡ್ಡನ ಕೇರಿಯನ್ನು ನೋಡುತ್ತಾ ಸುಮ್ಮನೆ ನಿಂತನು. ಸಿದ್ಧಸಾಧಕನು ಅವನನ್ನೇ ಸ್ವಲ್ಪ ಹೊತ್ತು ನೋಡಿ, "ಜಯಶೀಲಾ, ಹಾಗೆ ನೋಡುತ್ತ ಏನೋ ದೀರ್ಘಾಲೋಚನೆ ಮಾಡುತ್ತಿರುವೆಯಲ್ಲಾ? ನಾವು ಸುಮ್ಮಸುಮ್ಮನೆ ಈ ಕುಳ್ಳರ ಗುಂಪಿನವರ ವ್ಯವಹಾರದಲ್ಲಿ ಸಿಕ್ಕಿಕೊಂಡದ್ದು ನಮ್ಮದೇ ತಪ್ಪು." ಎಂದನು.

"ನಾವು ಬೇಕೆಂತಲೇ ಇಲ್ಲಿಗೆ ಬಂದು ಬೀಳಲಿಲ್ಲ ವಲ್ಲಾ? ಸಾಧಕಾ. ಅದಕ್ಕೆ ಕಾರಣ ಆ ಮೊಸಳೆಯಾಕಾರದ ದುಷ್ಟ ಮಕರಕೇತು. ನಾವು ಜಲಪಾತದಲ್ಲಿ ಸಿಕ್ಕಿಕೊಂಡು ಬೆಟ್ಟದ ಮೇಲಿನ ಪ್ರವಾಹದಿಂದ ಹೊಡೆದುಕೊಂಡು ಬಂದು ಹೀಗೆ ಬಿದ್ದವರು. ಇಲ್ಲಿ ನಮಗೆ ತಿಳಿಯದಂತೆಯೇ ಈ ಅರಣ್ಯವಾಸಿಗಳ ವ್ಯವಹಾರದಲ್ಲಿ ಸಿಕ್ಕಿರುವುದನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ಏನಾದರೂ ನಾವು ಈ ಪ್ರಾಂತದಿಂದ



ಹೊರಟುಹೋಗುವುದರೊಳಗೆ. ಆ ಕೃಪಾಣಜಿತ್ತನ್ನು ಮಾತ್ರ ಪರಲೋಕಕ್ಕೆ ಕಳುಹಿಸಿಯೇ ತೀರಬೇಕು." ಎಂದ ಜಯಶೀಲ.

"ಮಹಾಕಾಲನ ದಯದಿಂದ ಆ ಕೆಲಸ ತೀರಿಸಲಿಕ್ಕೇ ನಾವಿಲ್ಲಿ ಬಂದಿರಬೇಕು. ಆ ಕೃಪಾಣಜಿತ್ತುವಿನೊಂದಿಗಿರುವ ಕ್ರೂರ ಮೃಗವನ್ನು ಕೂಡಾ ಕೊಂದು ಅದರ ಚರ್ಮ ತೆಗೆದುಕೊಳ್ಳಲೇಬೇಕು. ಬಾರಯ್ಯ. ಹೋಗೋಣ. ಬೋದ ತಪ್ಪುವಷ್ಟು ಹಸಿವೆಯಾಗುತ್ತದೆ. ಕುಳ್ಳರಾಣಿಯ ಗೂಡಾರಕ್ಕೆ ಹೋಗಿ ಏನಾದರೂ ತುಂಬಿಸಿಕೊಳ್ಳೋಣ" ಎಂದು ಹೇಳಿ ಸಿದ್ಧಸಾಧಕನು ಅಲ್ಲಿಂದ ಹೊರಟುಬಿಟ್ಟನು.

ಜಯಶೀಲನೂ ಅವನೊಂದಿಗೇ ಹೊರಟನು. ಇಬ್ಬರೂ ಅದೂ ಇದೂ ಮಾತಾಡುತ್ತ ಕೆಳಗಿಳಿಯುತ್ತಿರುವಾಗ, ಕೆಳಗೆ ಮರಗಳ ಹಿಂದೆ ಅಡಗಿಕೊಂಡು ಗಡೇಗುಡ್ಡನೂ. ಕೃಪಾಣಜಿತ್ತುವೂ ತಮಗುಂಟಾದ ಅಪಜಯಕ್ಕೆ "ನೀನೇಕಾರಣ" ಎಂದು ಒಬ್ಬರ ಮೇಲೊಬ್ಬರು ತಪ್ಪುನಿಂದೆ ಮಾಡಿಕೊಂಡಿದ್ದರು.

"ಅಯ್ಯಾ, ಮಹಾಕಾಯರೇ. ನಿಮಗಿರುವುದೆಲ್ಲಾ ಭಾರಿಯ ಶರೀರವೇ ಹೊರತು ಅದಕ್ಕೆ ತಕ್ಕ ಹಾಗೆ ಗುಂಡಿಗೆ ಬಲವೇನೂ ಕಾಣುವುದಿಲ್ಲ. ನಮಗಿಂತಲೂ ಮೊದಲು ನೀವೇ ಓಡಿಹೋಗಲು ಪ್ರಾರಂಭ ಮಾಡಿದಿರಿ. ನೀವು ಪಳಗಿಸಿಕೊಂಡು ಕೆಲಸ ಮಾಡಿಸುವ ಈ ನರವಾನರ ನಿಮ್ಮನ್ನೇ ಕೊಲ್ಲ ಪ್ರಯತ್ನಮಾಡಿತಲ್ಲಾ! ನಿಮ್ಮದೇನು ಹೆಬ್ಬ ನಮಗಿಂತಲೂ?" ಎಂದ ಗಡೇಗುಡ್ಡ.

ಅವನ ಮಾತುಗಳಿಂದ ಕೃಪಾಣಜಿತ್ತು ರುಬ್ಬ ಹಲ್ಲು ಕಡಿಯುತ್ತ, "ಎಲೋ ಕುರುಡಗುಡ್ಡ ನಾನು ಶತ್ರುಗಳಿಗೆ ಬೆನ್ನು ತೋರಿಸಿ ಓಡ ಸಮಯವಲ್ಲವೆಂದೇ ಓಂದಿರುಗಿದೆ ಅಷ್ಟೇ. ಕಡೆಗೆ ಬಾಣ ಹೊಡೆದ ಜಯಶೀಲನೆಂಬ ದುಷ್ಟ ಶತ್ರುವನ್ನು ನಾಳೆ ಸೂರ್ಯೋದಯದ ಕೊಲ್ಲದೇ ಹೋದರೆ ನನ್ನ ಹೆಸರು ಕೃಪಾ ಅಲ್ಲ, ಕೀಟಜಿತ್ತು! ಇನ್ನು ನನ್ನ ನರವಾನರದ ಕೇಳುವೆಯಾ? ಅದು ಕೋತಿಯ ಮ ನಾನು ಹೇಳಿದ ಹಾಗೇ ಕೇಳುವಂಥಾದ್ದು. ರುಜುವುಬೇಕೇ?..." ಎಂದು ಹೇಳಿ ನರವಾ ಗಡೇಗುಡ್ಡನನ್ನು ತೋರಿಸಿ ಕೈಯಾಡಿಸಿದನು.

ನರವಾನರವು ಮಿಂಚಿನ ವೇಗದಲ್ಲಿ ಹೋಗಿ ಗುಡ್ಡನನ್ನು ಎತ್ತಿಕೊಂಡು ಭಯಂಕರವಾಗಿ ತೊಡಗಿತು. ತಮ್ಮ ಒಡೆಯನು ಪ್ರಾಣಾಪಾ ಸ್ಥಿತಿಯಲ್ಲಿರುವುದನ್ನು ನೋಡಿ ಗಡೇಗುಡ್ಡನ ಚರರು ಭಲ್ಲೆಗಳನ್ನೆತ್ತಿ ಕೂಗುತ್ತ ನರವಾನರ ಕೃ ಜಿತ್ತುಗಳ ಮೇಲೆ ಹಾರಿ ಬರತೊಡಗಿದರು.

(ಮುಂದುವರಿಯುವು






ರಾವಣನು ಅದ್ಭುತವಾದ ಲಂಕಾಯಾಗಕ್ಕೆ ಪ್ರಾರಂಭ ಮಾಡಿದ ಸಮಾಚಾರವು ಗೂಢಚಾರರ ಮೂಲಕ ವಿಭೀಷಣನಿಗೆ ಗೊತ್ತಾಯಿತು. ಅದು ರಾಮಲಕ್ಷ್ಮಣರಿಗೆ ತುಂಬಾ ಅಪಾಯಕಾರಿಯಾಗಿತ್ತು. ಅವನು ಕಳವಳ ಪಡುತ್ತ ರಾಮಲಕ್ಷ್ಮಣರನ್ನು ಕುರಿತು, "ರಾವಣನು ತಲೆಹಾಕಿರುವ ಈ ಲಂಕಾಯಾಗವು ಪೂರ್ತಿಯಾದ ಪಕ್ಷದಲ್ಲಿ ಆ ಯಾಗವೇದಿಕೆಯೊಳಗಿನಿಂದ ಉಕ್ಕಿನ ಶರೀರದವರಾದ ಯೋಧರೂ, ಚತುರಂಗಬಲಗಳೂ ಉದ್ಭವಿಸಿಬಿಡುತ್ತವೆ. ಹಾಗಾಗಿಬಿಟ್ಟರೆ ರಾವಣನನ್ನು ಜಯಿಸುವ ಕಾರ್ಯವು ಸಾಧ್ಯವಾಗದು. ಆದುದರಿಂದ ರಾವಣನು ಮಾಡುವ ಯಾಗವನ್ನು ಭಗ್ನಮಾಡಬೇಕು. ಅದು ಸುಲಭವಾದ ಕಾರ್ಯವಂತೂ ಅಲ್ಲ." ಎಂದನು.

ಆದರೆ ಅದನ್ನು ಹೇಗೆ ಮಾಡಬೇಕೆನ್ನುವುದು ದೊಡ್ಡ ಸಮಸ್ಯೆಯಾಗಿತ್ತು. ಆ ಸ್ಥಳಕ್ಕೆ ಪರಿಚಿತರಿಗೆ ಕೂಡಾ ಹೋಗಲು ಸಾಧ್ಯವಾಗದು. ಇರುವೆಗೆ ಸಹಾ ನುಸುಳುವುದು ಅಸಾಧ್ಯ. ಅಂದಮೇಲೆ ಅಪರಿಚಿತರಿಗೆ ಹೇಗೆ ಸಾಧ್ಯವಾದೀತು ? ಮಾಯಾ ಶರೀರಿಗಳಾಗಿ ಹೋಗುವವರಾಗಬೇಕು. ಅಂಥವರಾರು ?

"ನಮ್ಮ ಅಂಗದನಿಗೆ ಅದೃಶ್ಯಕರಣಿ ಎಂಬ ವಿದ್ಯೆ ಗೊತ್ತಿದೆ. ಸಾಹಸದಲ್ಲಿಯೂ ಅವನೇನೂ ರಾಕ್ಷಸರಿಗೆ ಕಡಿಮೆಯವನಲ್ಲ. ಅವನ ಸಹಾಯದಿಂದ ಅವನು ರಾವಣನ ಹೋಮವು ಸಾಗದಂತೆ ತಡೆಯಬಹುದು" ಎಂದು ಜಾಂಬವಂತನು ಸೂಚನೆ ಮಾಡಿದನು.

ಅದರಂತೆ ಅಂಗದನು ಅದೃಶ್ಯಕರಣಿ ವಿದ್ಯೆಯ ಪ್ರಭಾವದಿಂದ ಯಾರ ಕಣ್ಣಿಗೂ ಕಾಣದಂತೆ ರಾವಣನ ಅಂತಃಪುರದೊಳಗೆ ಪ್ರವೇಶಮಾಡಿ, ಮಂಡೋದರಿಯ ತಲೆಮುಡಿಯ ಕೊಪ್ಪು ಹಿಡಿದು ಎಳೆಯುತ್ತಾ ರಾವಣನು ಯಾಗಮಾಡುವಲ್ಲಿಗೆ ಬಂದನು. ಅದನ್ನು ನೋಡಿಯೂ ನೋಡದವನಂತೆಯೇ ರಾವಣನು ತನ್ನ ಯಾಗದೀಕ್ಷೆಯಲ್ಲೇ ಆಹುತಿಗಳನ್ನು ಕೊಡುತ್ತ ಕುಳಿತಿದ್ದನು. ಅಂಗದನು ಮಂಡೋದರಿಯನ್ನು ಮತ್ತೆಲ್ಲಿಗೋ ಎಳೆದುಕೊಂಡು ಹೋಗತೊಡಗಿದನು. ಅವಳ ಆರ್ತನಾದಕ್ಕೂ ರಾವಣನು

೩೦. ರಾಮಲಕ್ಷ್ಮಣರ ಅಪಹರಣ



ಕಿವಿಗೊಡಲಿಲ್ಲ. ಅವನು ಗಟ್ಟಿಯಾಗಿ ಮಂತ್ರೋಚ್ಚಾರ ಮಾಡುತ್ತ ಮೇಲೆ ಮೇಲೆ ಹೋಮಕ್ಕೆ ಆಹುತಿಗಳನ್ನು ಸುರಿಯುತ್ತಿದ್ದನು.

"ಅಯ್ಯೋ! ನನ್ನನ್ನು ಕೇಳುವವರಿಲ್ಲದಾಯಿತಲ್ಲಾ! ಮೂರು ಲೋಕಗಳನ್ನೂ ಜಯಿಸಿದವನ ಹೆಂಡತಿಯನ್ನು ಕಾಪಾಡುವವರು ಈಗ ಯಾರೂ ಇಲ್ಲವೇ? ನನ್ನನ್ನೇ ಮೊದಲು ಯಾಗಕ್ಕೆ ಆಹುತಿ ಕೊಟ್ಟುಬಿಡಬಾರದೇ?" ಎಂದು ಮಂಡೋದರಿ ಗಟ್ಟಿಯಾಗಿ ಕೂಗಿದಳು.

ರಾವಣನು ಇನ್ನು ತಾಳಲಾರದೆ ಯಾಗಕಾರ್ಯವನ್ನು ನಿಲ್ಲಿಸಿ ಥಿಗ್ಗನೆದ್ದನು. ಅಲ್ಲಿಗೆ ಆ ಯಾಗವು ಭಗ್ನವಾಗಿ ಹೋಯಿತು. ಆ ಕ್ಷಣವೇ ಅದೃಶ್ಯನಾಗಿದ್ದ ಅಂಗದನು ಮಂಡೋದರಿಯನ್ನು ಬಿಟ್ಟು ಮೆತ್ತಗೆ ಜಾರಿಕೊಂಡನು. ಅವನ ಕೆಲಸವಾಯಿತು.

ರಾವಣನು ತಲೆಯ ಮೇಲೆ ಕೈಹೊತ್ತು ಕುಸಿ ಕುಳಿತನು. "ಈಗಲಾದರೂ ರಾಮನೊಂದಿಗೆ ಸಂಧಿ ಮಾಡುವುದು ಒಳ್ಳೇದು." ಎಂದು ಮಂಡೋದರಿ ದೀನಳಾಗಿ ರಾವಣನಿಗೆ ಸಲಹೆ ಕೊಟ್ಟಳು.

ಇಷ್ಟರವರೆಗೆ ತನ್ನ ಬಲವನ್ನೂ, ತನಗಿರುವ ಶರೀರ ಶಕ್ತಿಯನ್ನೂ ನೋಡಿಕೊಂಡು ರಾಮನೊಂದಿಗೆ ಯುದ್ಧಮಾಡಲು ಸಿದ್ಧಯುಮಾಡಿಕೊಂಡಿದ್ದ ರಾವಣನು ಮಂಡೋದರಿಯ ಮಾತಿಗೆ ಕಿವಿಗೊಡದೆ, "ನನ್ನ ಬಂಧುಮಿತ್ರರನ್ನು, ತಮ್ಮನನ್ನು ಮಕ್ಕಳನ್ನು ಕಳೆದುಕೊಂಡು ಈಗ ಕ್ಷುದ್ರನ ಹಾಗೆ ಆ ರಾಮನೊಂದಿಗೆ ಸಂಧಿಮಾಡಿಕೊಳ್ಳಲು ಹೇಳುವಿಯಾ? ರಾಮನು ನನ್ನನ್ನು ಕೊಂದನೆಂಬ ಕೀರ್ತಿ ಅವನಿಗೆ ಬಾರದಂತೆ ನಾನೇ ಪ್ರಾಯೋಪವೇಶ ಮಾಡಿ, ಯೋಗಮಾರ್ಗದಿಂದ ಕಪಾಲವನ್ನು ಭೇದಿಸಿ ಪ್ರಾಣತ್ಯಾಗ ಮಾಡುತ್ತೇನೆ. ನನ್ನನ್ನು ಕೊಂದು ವಿಭೀಷಣನಿಗೆ ಪಟ್ಟಗಟ್ಟುವೆನೆಂದು ಪ್ರತಿಜ್ಞೆ ಮಾಡಿದ ರಾಮನು ನನ್ನನ್ನು ಕೊಲ್ಲದೆ ಪ್ರತಿಜ್ಞಾಭಂಗ ಮಾಡಿದವನಾಗಬೇಕು. ರಾಮನು ಕಳ್ಳನ ಹಾಗೆ ಬಂದು ತನ್ನ ಹೆಂಡತಿಯನ್ನು ಕರೆದುಕೊಂಡು ಹೋಗುವವನಲ್ಲ. ನಾನು ಹೋದಮೇಲೆ ನೀವೆಲ್ಲಾ ಸಹಗಮನ ಮಾಡುವಾಗ ಸೀತೆಯನ್ನು ಕೂಡಾ ಚಿತಿಯೊಳಗೆ ದೂಡಿಸಿ ಬಿಡಿರಿ. ಆಗ ಅವಳು ನನ್ನವಳೇ ಆದಂತಾಗಿ. ರಾಮನು ಸೀತಾವಿಯೋಗದಿಂದಾದ ಅವಮಾನದಲ್ಲಿ ತನ್ನಂತೆ ಸಾಯುತ್ತಾನೆ, ಬದುಕಿದ್ದು ಯಾರಿಗೆ ಹೇಗೆ ಮುಖ ತೋರಿಸುತ್ತಾನೆ?" ಎಂದು ಹೇಳಿ ರಾವಣನು ಮತಿಭ್ರಮಣವಾದವನಂತೆ ಪಶ್ಚಿಮದಿಕ್ಕಿಗೆ ಅಭಿಮುಖವಾಗಿ ಹೋದನು. ಮಂಡೋದರಿ ದಿಗ್ಭ್ರಮೆಯಿಂದ ಅವನನ್ನೇ ನೋಡುತ್ತಾ ನಿಂತಳು.

ಲಂಕೆಯಲ್ಲಿ ಹೀಗೆ ನಡೆಯುತ್ತಿರುವ ಅದೇ ಸಮಯದಲ್ಲಿ ಲಂಕೆಗೆ ಸಾವಿರ ಯೋಜನ ಕೆಳಗಡೆಯಲ್ಲಿರುವ ಪಾತಾಳಲಂಕೆಯಲ್ಲಿ ಇನ್ನೊಂದು ಭಯಂಕರವಾದ ಕಥೆ ನಡೆಯುತ್ತಿದ್ದಿತು. ಅದೇನೆಂದರೆ, ಮೈರಾವಣನೆಂಬವನು ಪಾತಾಳಲಂಕೆಯನ್ನು

ಆಳುತ್ತಿದ್ದನು. ಅವನಿಗೆ ದೊಡ್ಡ ದೊಡ್ಡ ಮಂತ್ರಶಕ್ತಿಗಳಿದ್ದುವು. ಬಗೆಬಗೆಯ ಮಾಯೆಗಳನ್ನು ಬಲ್ಲವನು. ಅವನಿಗೆ ಅಹಿರಾವಣನೆಂಬ ಒಬ್ಬ ಅಣ್ಣನೂ ಇರುವನು. ಅನೇಕ ರಾಕ್ಷಸರೂ, ಸರ್ಪದೇಹಿಗಳೂ ಅದ್ಭುತ ಮಾಯಾ ಶಕ್ತಿಗಳುಳ್ಳ ಅನೇಕರು ಅವನ ಸೈನ್ಯದಲ್ಲಿದ್ದರು.

ಮೈರಾವಣನು ನಾಗಲೋಕದಿಂದ ವಾಸುಕಿಯ ಕುಮಾರಿಯಾದ ಚಂದ್ರಸೇನೆಯನ್ನು ಎತ್ತಿಕೊಂಡು ಬಂದು ನಿರ್ಬಂಧದಲ್ಲಿಟ್ಟು, ತನ್ನನ್ನು ಮದುವೆಯಾಗುವಂತೆ ಅವಳಿಗೆ ಒತ್ತಾಯ ಮಾಡುತ್ತಿದ್ದನು. ಅಸಾಮಾನ್ಯ ಸೌಂದರ್ಯವತಿಯಾದ ಅವಳು ಮನಸಾರೆ ರಾಮನನ್ನು ವರಿಸಿ, ಅವನೇ ತನ್ನಗಂಡನೆಂದೂ ಅವನಹೊರತು ಅನ್ಯರನ್ನು ನೆನೆಯಲಾರೆನೆಂದೂ ಖಂಡಿತವಾಗಿ ಹೇಳಿಬಿಟ್ಟಿದ್ದಳು. ಸೀತೆಯ ಸ್ವಯಂವರಕ್ಕೆ ಅವಳು ನಾಗಪರಿವಾರದೊಂದಿಗೆ ಹೋಗಿ ರಾಮನನ್ನು ನೋಡಿದ್ದಳು. ಅಂದಿನಿಂದ ಅವಳು ರಾಮನ ವಿಗ್ರಹವನ್ನೇ ಆರಾಧಿಸಿಕೊಂಡಿದ್ದಳು. ಅವಳ ಸೌಂದರ್ಯವನ್ನು ಕೇಳಿದ ಮೈರಾವಣನು, ಮಾಯೆಯಿಂದ ಅವಳನ್ನು ಅಪಹರಿಸಿ ತಂದು ಬಂಧನದಲ್ಲಿಟ್ಟಿದ್ದನು.

ಲಂಕೆಯಲ್ಲಿ ರಾವಣನು ಪಶ್ಚಿಮ ಸಮುದ್ರತೀರವನ್ನು ತಲಪಿ ಅಲ್ಲಿ ದರ್ಭೆಗಳನ್ನು ಹರಡಿ ಅದರ ಮೇಲೆ ಮಲಗಿ ಪ್ರಾಯೋಪವೇಶ ದೀಕ್ಷೆ ಕೈಗೊಂಡನು. ಅದನ್ನು ನೋಡಿ ಅವನ ರಾಕ್ಷಸ ಪರಿವಾರದವರು ದಿಕ್ಕು ತೋಚದೆ ಸ್ತಬ್ಧರಾಗಿ ಕುಳಿತುಬಿಟ್ಟಿದ್ದರು.

ಆಗ ಎಲ್ಲಿಗೋ ಹೊರಟಿದ್ದ ನಾರದನು ರಾವಣನನ್ನು ನೋಡಿ ಅವನ ಬಳಿಗೆ ಬಂದು, "ಇದೇನು ಕೆಲಸ ರಾವಣಾ? ನೀನು ಜತೆಗಾರರಿಲ್ಲದವನಾಗಿ ಹೋದೆಯೇನು? ಒಂಟಿಯಾದೆನೆಂದು ಈ ಕೆಲಸವೇ? ನಿನ್ನ ಮಿತ್ರನೂ ನಿನಗೆ ಸೋದರನಂಥವನೂ ಆದ ಮೈರಾವಣನನ್ನು ಮರೆತೆಯಾ?



ಈ ಕಷ್ಟಕಾಲದಲ್ಲಿ ಅವನು ನಿನ್ನನ್ನು ಕೈ ಬಿಡುವನೆಂದು ಅನುಮಾನಿಸುವಿಯಾ?" ಎಂದು ಹೇಳಿ, ರಾವಣನೇನೂ ಮಾತಾಡದಿರಲು, "ನಿನ್ನಿಷ್ಟ" ಎಂದು ಹೊರಟು ಹೋದನು.

ನಾರದನ ಮಾತಿನಿಂದ ರಾವಣನನ್ನು ಹೊಸ ಉತ್ಸಾಹವೊಂದು ಆಕ್ರಮಿಸಿತು. ಕಣ್ಣು ಮುಚ್ಚಿಕೊಂಡೇ ಮೈರಾವಣನನ್ನು ಧ್ಯಾನಿಸಿದನು. ಆ ಹೊತ್ತಿಗೇ ಮೈರಾವಣನು ಚಂದ್ರಸೇನೆಯ ಬಳಿಗೆ ಹೋಗಿ, "ಎಲೈ, ಚಂದ್ರಸೇನೇ! ರಾಮನ ಜಪವನ್ನು ನೀನು ಬಿಡಲಾರೆಯಷ್ಟೆ? ಆ ನಿನ್ನ ರಾಮನನ್ನು ತಂದು ಕಾಳೀಮಾತೆಗೆ ಬಲಿ ಕೊಡುತ್ತೇನೆ" ಎಂದನು. "ಕಾಳೀದೇವಿ ನಿಜವಾದ ಲೋಕಮಾತೆಯಾದರೆ ಆ ರಾಮನಿಂದಲೇ ನಿನ್ನನ್ನು ಕೊಲ್ಲಿಸುತ್ತಾಳೆ. ಬೇಗನೇ ಆ ಕಾರ್ಯ ನೆರವೇರಿಸು" ಎಂದಳು ಚಂದ್ರಸೇನೆ. "ಹುಚ್ಚಳೇ, ನಾನು ಯಾರೆಂದು ತಿಳಿದೆ? ನನ್ನನ್ನು ಕೊಲ್ಲುವುದು ಸುಲಭ



ವೆಂದು ಭಾವಿಸಿದೆಯಾ? ಈ ಪಾತಾಳ ಲಂಕೆಗೆ ಸಾವಿರ ಯೋಜನ ದೂರ ಕೆಳಗೆ ಭಯಂಕರವಾದ ಒಂದು ಗುಹೆಯಲ್ಲಿ, ರತ್ನದ ಪೆಟ್ಟಿಗೆಯೊಳಗೆ ಐದು ತುಂಬಿಗಳ ರೂಪದಲ್ಲಿ ನನ್ನ ಜೀವವಿದೆ. ಪೆಟ್ಟಿಗೆ ತೆರೆದ ಕೂಡಲೇ ಝುಂಮನೆ ಮೇಲೆ ಬರುವ ಐದು ತುಂಬಿಗಳನ್ನೂ ಒಂದೇಬಾರಿಗೆ ಕೊಂದರೇನೇ ನಾನು ಸಾಯುವುದು. ಆ ಭಯಂಕರ ಗುಹೆಯನ್ನು ಮಹಾ ಶಕ್ತಿಯ ಪಿಶಾಚಗಳು ಕಾಪಾಡಿಕೊಂಡಿವೆ. ಇಂಥಾ ಶಕ್ತಿ ನನಗೆ ಕೊಟ್ಟವಳೇ ಕಾಳೀದೇವಿ ಗೊತ್ತೇ? ಹೀಗಿರುವ ನನ್ನ ಪ್ರಾಣ ತೆಗೆಯುವವನು ಮೂರು ಲೋಕಗಳಲ್ಲಿಯೂ ಯಾರಿಲ್ಲ. ಕೇವಲ ಮನುಷ್ಯ ನಾದ ನಿನ್ನ ರಾಮನೊಂದು ಲೆಕ್ಕದವನೇ?" ಎಂದು ಹೇಳಿ ಮೈರಾವಣನು ಅವಳ ಹತ್ತಿರವಿದ್ದ ರಾಮನ ವಿಗ್ರಹವನ್ನು ನೆಲಕ್ಕೆ ಬಡಿದು ಚೂರು ಚೂರು ಮಾಡಿದನು. ಅದೇ ಕ್ಷಣದಲ್ಲಿ ರಾವಣನು ತನ್ನನ್ನು ನೆನೆಸುತ್ತಿರುವನೆಂದು ಅವನಿಗೆ ಗೊತ್ತಾಯಿತು.

ಕೂಡಲೇ ಅವನು ರಾವಣನ ಬಳಿಗೆ ಬಂದು "ರಾವಣಾ, ನನಗೆಲ್ಲವೂ ಗೊತ್ತಾಯಿತು, ನನಗೆ ಬೇಕಾದುದನ್ನೇ ನೀನು ಬಯಸುವಿ. ನಾಳೆಯೇ ಆ ರಾಮಲಕ್ಷ್ಮಣರನ್ನು ಕಾಳಿಗೆ ಬಲಿಕೊಟ್ಟು ಬಿಡುತ್ತೇನೆ. ಚಿಂತೆ ಬಿಡು, ಲಂಕೆಗೆ ಇನ್ನೇನೂ ಅಪಾಯವಿಲ್ಲ" ಎಂದ ಮೈರಾವಣ. ರಾವಣನು ಸಂತೋಷಪಟ್ಟು ಮೈರಾವಣನನ್ನು ತನ್ನ ಮಂದಿರಕ್ಕೆ ಕರೆದುಕೊಂಡು ಹೋಗಿ ಬಹಳವಾಗಿ ಉಪಚರಿಸಿದನು.

ಗೂಢಚಾರರ ಮೂಲಕವಾಗಿ ಈ ಸಂಗತಿಕೂಡಾ ವಿಭೀಷಣನಿಗೆ ತಿಳಿಯಿತು. ಆಗ ರಾತ್ರಿಯಾದುದರಿಂದ ರಾಮಲಕ್ಷ್ಮಣರು ನಿದ್ದೆಮಾಡಲು ತಯಾರಾಗುತ್ತಿದ್ದರು. ವಿಭೀಷಣನು ವಾನರರ ಬಳಿಗೆ ಬಂದು ಮೈರಾವಣನ ಸಮಾಚಾರವನ್ನು ಹೇಳಿ, "ಈ ರಾತ್ರಿಯಲ್ಲಿ ಮೈರಾವಣನು ರಾಮಲಕ್ಷ್ಮಣರನ್ನು ಅಪಹರಿಸದಂತೆ ತುಂಬಾ ಎಚ್ಚರದಿಂದ ನಾವು ಕಾಪಾಡಬೇಕಾಗಿದೆ. ಮೈರಾವಣ ಸಾಮಾನ್ಯ ಮಾಯಾವಿಯಲ್ಲ" ಎಂದು ಹೇಳಿ ಆಚೆಗೆ ಹೋದನು.

ಹನುಮಂತನು ಕೂಡಲೇ ತನ್ನ ಬಾಲವನ್ನು ಬೆಳೆಯಿಸಿ ರಾಮಲಕ್ಷ್ಮಣರು ಮಲಗಿರುವಲ್ಲಿ ಸುತ್ತಲೂ ಒಂದು ಕೋಟೆಯಂತೆ ಸುತ್ತಿದನು. ಆಮೇಲೆ ಅವನು ತನ ಬಾಲದ ಸುತ್ತಿನಮೇಲೆ ಕುಳಿತುಕೊಂಡು ಒಂದು ಇರುವೆ ಸಹಾ ಒಳಗೆ ನುಗ್ಗದಂತೆ ಜಾಗರೂಕತೆಯಿಂದ ನಾಲ್ಕು ಸುತ್ತಲೂ ಕಣ್ಣು ತಿರುಗಿಸಿ ನೋಡುತ್ತಿದ್ದನು.

ಸ್ವಲ್ಪ ಹೊತ್ತಿಗೆ ವಿಭೀಷಣನು ಮತ್ತೆ ಬಂದು ಹನುಮಂತನ ಶ್ರದ್ಧೆಯನ್ನೂ ಕೆಲಸವನ್ನೂ ಮೆಚ್ಚಿಕೊಂಡು, ಒಂದುಸಾರಿ ತಾನು ಒಳಗೆ ಹೋಗಿ ರಾಮಲಕ್ಷ್ಮಣರ ಕೈಗಳಿಗೆ ರಕ್ಷಾಬಂಧನ ಕಟ್ಟಿಬಿಡುತ್ತೇನೆಂದನು. ಹನುಮಂತನು ತನ್ನ ಬಾಲವನ್ನು ಸಡಲಿಸಿ ವಿಭೀಷಣನು ಮಾತ್ರ ಒಳಗೆ ಹೋಗಲು ತಕ್ಕಷ್ಟೇ ದಾರಿ ಮಾಡಿದನು.

ವಿಭೀಷಣನು ತನ್ನ ಕೆಲಸವನ್ನು ಮುಗಿಸಿ ಹೊರಗೆ ಬಂದು. "ಆದರೂ ಹನುಮಂತಾ, ನಾನು ರಕ್ಷಾ ಬಂಧನ ಕಟ್ಟಿದೆನೆಂದು ನೀನು ಅಪ್ರಮತ್ತನಾಗಿರಬೇಡ. ಆ ಮಹಾ ಮಾಯಾವಿ ಮೈರಾವಣನು ನನ್ನ ಅಥವಾ ನನ್ನವರ ರೂಪದಲ್ಲಿ ಬಂದು ಮೋಸಗೀಸ ಮಾಡಿಯಾನು. ಜಾಗರೂಕನಾಗಿರು! ನಾನೂ ಸುತ್ತಾಡಿಕೊಂಡು ಇರುತ್ತೇನೆ" ಎಂದು ಎಚ್ಚರಿಕೆ ಹೇಳಿ ಹೊರಟು ಹೋದನು.

ಅವನು ಅಂದ ಹಾಗೆಯೇ ಸ್ವಲ್ಪಹೊತ್ತಿಗೆ ಪುನಃ ವಿಭೀಷಣನು ಬಂದನು. ಹನುಮಂತನು ಅವನ ಕುತ್ತಿಗೆ ಹಿಡಿದು, ಗದೆಯಿಂದ ಹೊಡೆಯಲು ನೋಡುತ್ತ, "ಎಲೋ! ಮೈರಾವಣಾ? ನಿನ್ನ ಮಾಯೆ ನನ್ನ ಹತ್ತಿರ ತೋರಿಸುವಿಯಾ?" ಎಂದು ಹಲ್ಲು ಕಡಿದನು.

"ಅಯ್ಯೋ! ಹುಚ್ಚನೇ! ಮೋಸನಡೆದೇ ಹೋಯಿತೆಂದು ಕಾಣುತ್ತದೆ. ಈ ಮೊದಲು ಬಂದ ವಿಭೀಷಣ ಏನಂದ? ರಾಮಲಕ್ಷ್ಮಣರನ್ನು ಎತ್ತಿಕೊಂಡು ಹೋಗಲಿಲ್ಲವಷ್ಟೆ?" ಎಂದ ವಿಭೀಷಣ. ಹನುಮಂತನು ತನ್ನ ಬಾಲದ ಕೋಟೆಯೊಳಗೆ ಬಗ್ಗಿ ನೋಡಲು, ಅಲ್ಲಿ ರಾಮಲಕ್ಷ್ಮಣರು ಇರಲಿಲ್ಲ!

ಹನುಮಂತನು "ಹಾ" ಎಂದು ಕಣ್ಣು ಕತ್ತಲೆಗೊಂಡು ಕುಸಿಕುಳಿತನು. ಅವನಿಗೆ ಸರ್ವಾಂಧಕಾರವಾಯಿತು. ಏನು ಮಾಡಬೇಕೆಂಬುದೇ ತೋರಲಿಲ್ಲ. ಆಗ ಜಾಂಬವಂತನು ಅವನನ್ನು ಸಮಜಾಯಿಸುತ್ತ, "ಏಳೇಳು! ಚಿಂತಿಸುತ್ತಾ ಕುಳಿತರೆ ಏನೂ ಪ್ರಯೋಜನವಿಲ್ಲ. ಈಗ ರಾಮಲಕ್ಷ್ಮಣರನ್ನು ಕಾಪಾಡಬೇಕಾದವನು ನೀನೊಬ್ಬನೇ." ಎಂದನು.

ವಿಭೀಷಣನು ಅವನು ಮಾಡಬೇಕಾದ ಕಾರ್ಯವನ್ನು ಕುರಿತು ಹೇಳಿದನು. ಈಗ ಹನುಮಂತನಿಗೆ ಉತ್ಸಾಹವೆದ್ದಿತು. ಅವನು ವಿಭೀಷಣನ ಮೂಲಕವಾಗಿ ಪಾತಾಳಲಂಕೆಗೆ ಹೋಗುವ ದಾರಿಯನ್ನು



ತಿಳಿದು ದೇಹವನ್ನು ಬೆಳೆಸಿಕೊಂಡು ಆಕಾಶದ ಮೇಲೆ ಉಡ್ಡಾಣ ಮಾಡಿದನು.

ಇಷ್ಟರ ಮಧ್ಯದಲ್ಲಿ ವಿಭೀಷಣನ ರೂಪದಿಂದ, ರಾಮಲಕ್ಷ್ಮಣರ ಬಳಿ ಸೇರಿದ ಮೈರಾವಣನು ಅವರಿಬ್ಬರನ್ನೂ ತನ್ನ ಮಾಯೆಯಿಂದ ಚಿಕ್ಕ ಪ್ರತಿಮೆಗಳನ್ನಾಗಿ ಮಾಡಿ, ತನ್ನ ಬಟ್ಟೆಗಳಲ್ಲಿ ಅಡಗಿಸಿಕೊಂಡು ಪಾತಾಳಲಂಕೆಗೆ ಸೇರಿಬಿಟ್ಟಿದ್ದನು. ಅದೇ ವೇಗದಲ್ಲಿ ಅವನು ರಾಮಲಕ್ಷ್ಮಣರ ಪ್ರತಿಮೆಗಳನ್ನು ಚಂದ್ರಸೇನೆಗೆ ತೋರಿಸಿ, "ಇಕೋ ನಿನ್ನ ರಾಮ. ಇವನು ಅವನ ತಮ್ಮ ಲಕ್ಷ್ಮಣ. ಇವರಿಬ್ಬರನ್ನೂ ನಾಳೆ ಕಾಳಿಗೆ ಬಲಿಕೊಟ್ಟು ನಿನ್ನನ್ನು ಮದುವೆ ಮಾಡಿಕೊಂಡುಬಿಡುತ್ತೇನೆ. ಬಲಿಯ ವೇಳೆಯವರೆಗೂ ಇವರು ಪ್ರತಿಮೆಗಳ ರೂಪದಲ್ಲೇ ಇರುತ್ತಾರೆ. ಅಷ್ಟರವರೆಗೆ ಆಟವಾಡಿಕೊಂಡಿರು." ಎಂದು ವಿಕಟಾಟ್ಟಹಾಸ ಮಾಡಿ ನಗುತ್ತಾ ರಾಮಲಕ್ಷ್ಮಣರನ್ನು ಬಂಧನದಲ್ಲಿಟ್ಟನು.



30-5



ಹನುಮಂತನು ಪಶ್ಚಿಮ ಸಮುದ್ರದೊಳಗೆ ಪ್ರವೇಶಿಸಿ ಬಹುವೇಗದಿಂದ ಹೋಗುತ್ತಿರಲು, ತಾವರೆಯ ಮೊಗ್ಗಿನ ಆಕಾರದಲ್ಲಿ ಬೆಂಕಿಯ ಕೆಂಡದಂತೆ ಹೊಳೆಯುವ ಒಂದು ಪರ್ವತವನ್ನು ನೋಡಿದನು. ಹನುಮಂತನು ಆ ಪರ್ವತ ಶಿಖರವನ್ನು ಸೇರಿ ಅಲ್ಲಿದ್ದ ಚಿಕ್ಕದೊಂದು ಬಿಲವನ್ನು ನೋಡಿ, ಸೂಕ್ಷ್ಮರೂಪದಿಂದ ಆ ಬಿಲದೊಳಗಿಳಿದು ಹೋದನು. ಆ ಬಿಲವು ಅವನನ್ನು ಪಾತಾಳ ಲಂಕೆಯ ಸಿಂಹ ದ್ವಾರದಬಳಿಗೊಯ್ದು ನಿಲ್ಲಿಸಿತು.

ಆ ದ್ವಾರದಲ್ಲಿ ಮಹಾಬಲಶಾಲಿಯಾದ ಯುವಕನೊಬ್ಬ ಕಾವಲು ಕಾಯುತ್ತಿದ್ದನು. ಧಷ್ಟಪುಷ್ಟನಾಗಿ ಕಬ್ಬಿಣದ ಶರೀರದಂತಹ ಆ ಯುವಕನು ಹನುಮಂತನನ್ನು ನೋಡಿ, ಕೈಗಳನ್ನು ಚಾಚಿ ತಡೆಯುತ್ತ ಅಡ್ಡ ನಿಂತು, "ಯಾರೋ ನೀನು? ನನ್ನ ಕಣ್ಣು ತಪ್ಪಿಸಿ ಸಿಂಹ ದ್ವಾರದೊಳಗೆ ಹೊಕ್ಕು ಬಿಡಬೇಕೆಂದು ಹೊಂಚು ಹಾಕುವೆಯಾ? ಇಕೋ ಇಲ್ಲಿವರೆಗೆ ಬಂದ ತಪ್ಪಿಗೆ ನಿನ್ನ ಆಯುಸ್ಸು ತೀರಿತು. ನಿನಗೆ ಸಾವು ಬಂದಿತು" ಎನ್ನುತ್ತಾ ಮುಷ್ಟಿಬಿಗಿದು ಹನುಮಂತನ ಮೇಲೆ ಬಿದ್ದನು.

ದ್ವಾರಪಾಲಕನ ಬಲಪರಾಕ್ರಮವನ್ನು ನೋಡಿ ಹನುಮಂತನು ಆಶ್ಚರ್ಯ ಪಡುತ್ತ, "ಇವನೊಬ್ಬ ಹುಡುಗನಾದರೂ, ಇವನ ಬಲ ಪರಾಕ್ರಮಗಳು ನನಗೆ ಸಮಾನವಾಗಿರುವಂತಿದೆ. ಇವನನ್ನು ಸ್ವಲ್ಪ ಭ್ರಮೆಗೀಡುಮಾಡಿ ಆಮೇಲೆ ಹತ ಮಾಡಬೇಕು" ಎಂದುಕೊಂಡು ತುಂಬಾ ಆಯಾಸಗೊಂಡವನಂತೆ ಕುಸಿದು ಕುಳಿತು ತೇಕತೊಡಗಿದನು.

ತನ್ನನ್ನು ಕಂಡೇ ಹೆದರಿಬಿದ್ದನೆಂದು ಅಂದುಕೊಂಡು ದ್ವಾರಪಾಲಕನಾದ ಆ ಯುವಕನು, ಉತ್ಸಾಹದಿಂದ ದೊಡ್ಡದಾಗಿ ನಗುತ್ತ, "ಎಲೋ ಮಾಯಗಾರನೇ, ನನ್ನನ್ನು ಯಾರೆಂದುಕೊಂಡು ನನ್ನಮುಂದೆ ನುಗ್ಗುವ ಹಾಗೆ ಬಂದೆ? ಈಗಾದರೂ ತಿಳಿದು ಹಿಂದಿರುಗಿ ಓಡು. ನನ್ನ ಹೆಸರು ಮತ್ಸ್ಯವಲ್ಲಭ. ನನ್ನ ತಂದೆ ವೀರಾಗ್ರೇಸರನಾದ ಹನುಮಂತ. ಗೊತ್ತಾಯಿತೇ? ತೊಲಗಿನ್ನು" ಎಂದನು.

ಯುವಕನ ಮಾತು ಕೇಳಿ ಹನುಮಂತನಿಗೆ ಆಶ್ಚರ್ಯದೊಂದಿಗೆ ಕೋಪವೂ ಬಂದಿತು. ಅವನು ಹಲ್ಲು ಕಡಿಯುತ್ತ ಎದ್ದುನಿಂತು, "ಎಲೋ ಮಾನುಗಾರನೇ! ಲೋಕವೆಲ್ಲಾ ಬಲ್ಲ ಬ್ರಹ್ಮಚಾರಿ ಹನುಮಂತನು ನಿನ್ನ ತಂದೆಯೆ? ಇಂತಹ ಸುಳ್ಳು ಮಾತು ಹೇಳುವ ನೀನು ಈಗಲೇ ಸಾಯುವಿ!" ಎನ್ನುತ್ತಾ, ಮತ್ಸ್ಯವಲ್ಲಭನ ಮೇಲೆ ಹಾರಿದನು.

ಹನುಮಂತನು ಬಲವಾದ ಮುಷ್ಟಿಘಾತದಿಂದ ದ್ವಾರಪಾಲಕ ಯುವಕನನ್ನು ಕೊಲ್ಲಲು ನೋಡುವಾಗ, "ಸ್ವಾಮಿ, ಅವಸರಪಡಬೇಡಿ! ತಡೆಯಿರಿ! ತಡೆಯಿರಿ!" ಎಂಬ ಹೆಂಗುಸಿನ ಕೂಗು ಕೇಳಿಸಿತು.

ತಟ್ಟನೆ ಹನುಮಂತನು ತಲೆ ತಿರುಗಿಸಿ ನೋಡಿದನು. ಮಿಂಚಿನಂತೆ ಸೌಂದರ್ಯವತಿಯೊಬ್ಬಳು ಅವನ



30-6

ಕಡೆಗೆ ಓಡಿಬರುತ್ತಿರುವುದನ್ನು ನೋಡಿ ಇನ್ನಷ್ಟು ಆಶ್ಚರ್ಯದಿಂದ ನಿಂತನು. ಬಂದವಳೇ ಆ ಸುಂದರಿ ಹನುಮಂತನ ಪಾದಗಳಿಗೆ ನಮಸ್ಕಾರ ಮಾಡಿ "ಅವನು ಹೇಳಿದುದು ನಿಜವೇ. ನನ್ನ ಹೆಸರು ಸುವರ್ಚಲಾದೇವಿ. ದಕ್ಷಿಣ ಸಾಗರನು ನನ್ನ ತಂದೆ. ಅಸಂಖ್ಯವಾದ ಜಲಚರಗಳಿಗೆ ನಾನು ರಾಣಿ. ನಿನ್ನನ್ನು ನಾನು ಚೆನ್ನಾಗಿಬಲ್ಲೆ. ಹಿಂದೆ ನೀನು ಸಮುದ್ರವನ್ನು ಹಾರುತ್ತಿದ್ದಾಗ ಸಿಂಹಿಕೆ ನಿನ್ನ ನೆರಳನ್ನು ಹಿಡಿದೆಳೆದಳಷ್ಟೇ? ಆಗ ನೀನು ಅವಳೊಡನೆ ಹೋರಾಡುತ್ತಿರುವುದನ್ನು ಮತ್ಸ್ಯ ಶರೀರದಲ್ಲಿದ್ದ ನಾನೂ ನೋಡಿದೆ. ನೀನು ಸಿಂಹಿಕೆಯನ್ನು ಕೊಂದು ನಿನ್ನ ಹಣೆಯಲ್ಲಿದ್ದ ಬೆವರನ್ನು ಬೆರಳಿನಿಂದ ತೆಗೆದು ಕೆಳಕ್ಕೆ ಕೊಡವಿದೆ. ಮೀನಿನ ರೂಪದಲ್ಲಿ ತೇಲುತ್ತಿದ್ದ ನನ್ನ ಬಾಯಿಯೊಳಗೆ ಆ ಬೆವರಿನ ಬಿಂದುಗಳು ಬಿದ್ದುವು, ನಾನೂ ನುಂಗಿದೆ. ಆ ಕಾರಣದಿಂದ ನಾನು ಗರ್ಭಿಣಿಯಾಗಿ ಈ ಮತ್ಸ್ಯವಲ್ಲಭನನ್ನು ಹಡೆದೆನು. ಆದುದರಿಂದ ಇವನು ನಿನ್ನ ಮಗನೇ." ಎಂದಳು.

ಆಗ "ಹನುಮಾ! ಸುವರ್ಚಲಾದೇವಿ ಹೇಳಿದ್ದೆಲ್ಲವೂ ನಿಜ! ಮತ್ಸ್ಯವಲ್ಲಭನು ನಿನ್ನ ಕುಮಾರನೇ ನಿಜ!" ಎಂದು ದಿವ್ಯವಾಣಿಯೊಂದು ಮೊಳಗಿತು.

ಇನ್ನಷ್ಟು ಆಶ್ಚರ್ಯ ಸಂಭ್ರಮಗಳಿಂದ ಚೇತರಿಸದಿರುವ ಹನುಮಂತನೊಂದಿಗೆ ಸುವರ್ಚಲಾದೇವಿ ಮತ್ತೆ ಹೀಗೆಂದಳು; "ಮತ್ಸ್ಯವಲ್ಲಭನು ಹುಟ್ಟಿದಂದಿನಿಂದಲೇ ಧೈರ್ಯಸಾಹಸಗಳುಳ್ಳವನು. ಮಹಾ ಪರಾಕ್ರಮಶಾಲಿಯಾಗುತ್ತಾ, ಬೇಗಬೇಗನೇ ಬೆಳೆದು ದೊಡ್ಡವನಾಗುತ್ತಿದ್ದ ಅವನನ್ನು ಮೈರಾವಣನು ಎತ್ತಿಕೊಂಡು ಬಂದು ತನ್ನ ಕೆಲಸದಾಳನ್ನಾಗಿ ಮಾಡಿದ್ದಾನೆ. ನಿನ್ನ ದರ್ಶನವಾದ ಹೊರತು ಇವನಿಗೆ ದಾಸ್ಯ ವಿಮುಕ್ತಿ ಇಲ್ಲವೆಂದು ದಿವ್ಯವಾಣಿ ಹೇಳಿದೆ. ಈಗ ನಿನ್ನ ದರ್ಶನವಾಯಿತು. ಮತ್ಸ್ಯವಲ್ಲಭನಿಗೆ ಇಂದಿನಿಂದ ದಾಸ್ಯವೂ ತೊಲಗಿತು."

"ಹೌದು. ಸುವರ್ಚಲ ಹೇಳಿದ್ದೆಲಾ ನಿಜ! ಮತ್ಸ್ಯವಲ್ಲಭನು ಹನುಮಂತನ ಕುಮಾರನೇ!" ಎಂದು ದಿವ್ಯವಾಣಿ ಇನ್ನೊಮ್ಮೆ ಮೊಳಗಿತು.

ಮತ್ಸ್ಯವಲ್ಲಭನೂ ಆತ್ಮಾನಂದದಿಂದ ಹನುಮಂತನಿಗೆ ನಮಸ್ಕಾರ ಮಾಡಿದನು. ಹನುಮಂತನು ಅವನನ್ನೆಬ್ಬಿಸಿ ವಾತ್ಸಲ್ಯದಿಂದ ಗಾಢಾಲಿಂಗನ ಮಾಡಿಕೊಂಡನು ಸುವರ್ಚಲಾದೇವಿ ಸಂತೋಷದಿಂದ ಪುಳಕಿತಳಾಗಿ ಹನುಮಂತನೊಂದಿಗೆ, "ನೀನು ಚಂದ್ರಸೇನೆಯಬಳಿಗೆ ಹೋಗು. ಮೈರಾವಣನ ಪ್ರಾಣದ ರಹಸ್ಯವು ಅವಳಿಗೆ ಗೊತ್ತಿದೆ. ನಿನಗೆ ಅವಳಿಂದ ತುಂಬಾ ಸಹಾಯವಾಗುತ್ತದೆ, ಹೋಗು" ಎಂದು ಹನುಮಂತನಿಗೆ ನಮಸ್ಕಾರಮಾಡಿ ಮತ್ಸ್ಯವಲ್ಲಭನನ್ನು ಕರೆದುಕೊಂಡು ಹೊರಟುಹೋದಳು.



30-8